# ಕೊರವಂಜಿ

*Koravanji*

ಮೇ

೧೯೫೫



ಸಂಪಾದಕರು :

ಶ್ರೀ॥ ರಾ. ಶಿ.

ಬರಹಗಾರರು :

ಶ್ರೀಮತಿ ಇಂದುಮತಿ
ಶ್ರೀ॥ ಅ. ರಾ. ಸೇ.
ಶ್ರೀ॥ ಲ. ನ. ಹುರುಗಲವಾಡಿ
ಶ್ರೀ॥ ಕಾಮತ್
ಶ್ರೀ॥ "ಕೇಫ"
ಶ್ರೀ॥ ಸಾರಥಿ
ಶ್ರೀ॥ ಪಾಟಾಳಿ
ಶ್ರೀ॥ ವರದಿ ಐರ
ಶ್ರೀ॥ ಕುಮಾರ ಕಾಪು
ಶ್ರೀ॥ ಎ. ಜಿ. ಯಸ್ರಾವ್
ශ್ರೀ॥ ದಾಶರಥಿ ದೀಕ್ಷಿತ್

ಇತ್ಯಾದಿ, ಇತ್ಯಾದಿ.

ತಿಳಿನಗೆಯ ಮಾಸಪತ್ರಿಕೆ

ಇಂದಿನ ಫೇಸ್‌ಕ್ರೀಮುಗಳಲ್ಲಿ ಅತ್ಯುತ್ತಮವಾದುದು




# ರಾಜಾ
## ಸ್ನೋ



★ ಪರಿಶುಭ್ರವಾದುದು
★ ತಂಪಾದುದು
★ ಮೃದುವಾದುದು
★ ಜಿಗಟಿಲ್ಲದುದು
★ ಮನರಂಜಕ ಪರಿಮಳ ಮಿಳಿತವಾದುದು.

**MANYAM & CO.,**
BANGALORE, MADRAS,
MADURA, BOMBAY.

FEDERALS 705

ಯಶಸ್ವಿಯಾಗಿ ನಡೆಯುತ್ತಿದೆ

ಬೆಂಗಳೂರು **ಸ್ಟೇಟ್ಸ್** ಚಿತ್ರಮಂದಿರದಲ್ಲಿ

ದಿನ 3 ಆಟಗಳು

ಅಂಜಲಿ ಪಿಕ್ಚರ್ಸ್‌ರವರ...

# ಅನಾರ್ಕಲಿ

..ತೆಲುಗು..




**1-5-55** ರಿಂದ ಮೈಸೂರು— **ಚಾಮುಂಡೇಶ್ವರಿ**

**6-5 55** ರಿಂದ ಚಿತ್ರದುರ್ಗ—**ರೂಪವಾಣಿ**

A TALI.A P-LE

ಅತ್ಯಂತ ಯಶಸ್ವಿಯಾಗಿ ನಡೆಯುತ್ತಿದೆ

ಬೆಂಗಳೂರು ಪ್ರಭಾತ್ ಟಾಕೀಸಿನಲ್ಲಿ

ದಿನ 3 ಆಟಗಳು 3, 6-15 ಮತ್ತು 9-30ಕ್ಕೆ

ಪಕ್ಷಿರಾಜಾರವರ—

# ಆಜಾದ್

—(ಹಿಂದಿ)—



ದಿಲೀಪ್ ಕುಮಾರ್ — ಮೀನಾ ಕುಮಾರಿ

ಪ್ರಾಣ್ — ಓಂ ಪ್ರಕಾಶ್

ನಿರ್ದೇಶನ:
ಎಸ್. ಎಂ. ಶ್ರೀರಾಮುಲು ನಾಯುಡು

ಸಂಗೀತ:
ಸಿ. ರಾಮಚಂದ್ರ

**A Vijaya Talkie Release**




ಸಂಪುಟ ೧೪ ಮೇ ೧೯೫೫ ಸಂಚಿಕೆ ೨

## ಕುಹಕಿಡಿಗಳು

ಶ್ರೀಮಾನ್ ಗುಬ್ಬಿ ವೀರಣ್ಣನವರು ಸುಮಾರು ಅರುವತ್ತಕ್ಕೂ ಹೆಚ್ಚು ವರ್ಷಗಳಿಂದ ಕನ್ನಡಿಗರೆಲ್ಲರ ನಗುಮೊಗದ ಆದರ ವಿಶ್ವಾಸಗಳಿಗೆ ಪಾತ್ರರಾಗಿದ್ದಾರೆ. ಅನೇಕ ಸುಧಾರಣೆಗಳನ್ನು ರಂಗದಮೇಲೆ ತಂದು ಕಲೆಯ ಸೇವೆಯನ್ನು ನಗುನಗುತ, ನಗುನಗಿಸುತ್ತ ಮಾಡಿದ್ದಾರೆ. ಕಡೆಕಡೆಗೆ ಅವರು ರಂಗಸ್ಥಳದ ಮೇಲೆ ಬಂದರೆ ನಗುವುದಂತಿರಲಿ, ಎಲ್ಲಿಯಾದರೂ ಭೇಟಿಯಾದಾಗಲೂ ರಂಗಸ್ಥಳದ ಜ್ಞಾಪಕ ಬಂದು ನಗುವುದು ಸ್ವಾಭಾವಿಕವಾಗಿ ಹೋಗಿದೆ.

ಭಾರತಾಧ್ಯಕ್ಷರು ಈ ನಗುಮೊಗದ ಕಲಾಭ್ಯಾಸಿಗೆ ಈ ವರ್ಷಾದಿಯಲ್ಲಿ ಗೌರವವನ್ನು ಇತ್ತುದುದು ಕನ್ನಡಿಗರೆಲ್ಲರಿಗೂ ಹೆಮ್ಮೆಯ ವಿಷಯ. ಹಾಗೂ ನಗುವಿನ ಧ್ಯೇಯವನ್ನೇ ಇಟ್ಟುಕೊಂಡಿರುವ ಕೊರವಂಜಿಗಾದರೂ, ನಮ್ಮ ಕಸುಬಿನ ಹಿರಿಯಣ್ಣನಿಗೆ ಈ ಗೌರವ ದೊರಕಿದುದು ತನಗೇ ರೆಕ್ಕೆ ಪುಕ್ಕ ಬಂದಂತಾಗಿದೆ.

ಶ್ರೀ ಗುಬ್ಬಿ ವೀರಣ್ಣನವರಿಗೆ ನಮ್ಮ ಅಭಿವಂದನೆಗಳು. ಬಲುಕಾಲ ಕನ್ನಡ ಜನತೆಯನ್ನು ನಕ್ಕುನಗಿಸುವಂತೆ, ಪರಮೇಶ್ವರನು ಅವರಿಗೆ ಆಯುರಾರೋಗ್ಯವನ್ನು ದಯಪಾಲಿಸಲಿ.

* * *

ಸೌಜನ್ಯಕ್ಕೆ ತಕ್ಕಂತೆ ಹೆಸರು ಪುಟ್ಟಪ್ಪ! ಸಾಧಿಸಿರುವುದಾದರೂ ರಾಮಾಯಣ ಸಂದರ್ಶನ! ತಲೆಬಾಗಿ ಕೊರನಂಜಿಯು ನಮಸ್ಕರಿಸುತ್ತಾಳೆ.

*             *             *

ಮೋಕ್ಷಗುಂಡಂ ಅಂತ ನಮ್ಮ ದೇಶದಲ್ಲಿ ಒಂದು ಹಳ್ಳಿ ಇದೆ ಎಂದು ಭಾರತಕ್ಕೇ ತೋರಿಸಿಕೊಟ್ಟ ಭಾರತರತ್ನರಿಗೆ ಕೊರವಂಜಿಯು ಸಾಷ್ಟಾಂಗವೆರಗುತ್ತಾಳೆ.

*             *             *

ಭದ್ರಾವತಿಯ ಕಬ್ಬಿಣದ ಕಾರ್ಖಾನೆಯಲ್ಲಿ ಭಾರತರತ್ನ ಸರ್ ಎಂ. ವಿ. ಅವರ ಕಬ್ಬಿಣದ ಪ್ರತಿಮೆಯನ್ನು ಪ್ರತಿಷ್ಟೆಮಾಡಿದರಂತೆ.

*             *             *

ರೂರ್ಕಿಲಾ ಸುತ್ತಲೂ ಕಬ್ಬಿಣದ ಪರದೆಯನ್ನು ಹಾಕುತ್ತಾರೆ ಎಂದು ಅಮೆರಿಕಾ ಪತ್ರಿಕೆಗಳು ಭವಿಷ್ಯ ನುಡಿದಿಲ್ಲವಂತೆ.

*             *             *

ಬಾಂಡೂಂಗ್ ಸಮ್ಮೇಳನವು ಪಂ|| ನೆಹ್ರೂರವರ ಜೀವನದ ಹಿರಿದಾದ ಸಿದ್ಧಿ ಸಮಯ ಎಂದು ರಾಜಾಜಿ ಅವರು ಹೇಳಿದ್ದಾರೆ

— ಇತರ ೨೮ ರಾಷ್ಟ್ರಗಳಲ್ಲಿ ಅಲ್ಲಲ್ಲಿನ ಹಿರಿಯರು ಅದೇ ರೀತಿ ಅವರವರ ಪ್ರಧಾನಿಯ ವಿಷಯದಲ್ಲೂ ಹೀಗೇ ಅನ್ನುವುದು ನಮಗೆ ಗೊತ್ತಾಗಿಲ್ಲದಿರಬಹುದೇ?

*             *             *

ಪ್ರಜಾಸಭೆಯಲ್ಲಿ ಸದಸ್ಯರೊಬ್ಬರು "ಸಾರ್ವಜನಿಕ ನಾಟ್ಯರಂಗಸ್ಥಳಗಳನ್ನು ನಿರ್ಮಿಸಬೇಕು" ಎಂದರಂತೆ.

— ಯಾಕೆ ಸಭೆ ಇಲ್ಲವೇ? ಎಂದು ಯಾರೂ ಕೇಳಲಿಲ್ಲವಂತೆ.

*             *             *

ಚಿನ್ನದಗಣಿಯ ಆಗುಹೋಗುಗಳನ್ನು ಸರಳವಾಗಿ ಸ್ಪಷ್ಟವಾಗಿ ಶ್ರೀ ಸಿದ್ದ ವೀರಪ್ಪನವರು ವಿವರಿಸಿದಮೇಲೆ ಎಷ್ಟೋ ಜನರು "ಎಲ! ಎಲಾ! ಬಂಗಾರದಂತಹ ಮನುಷ್ಯರು ಚಿನ್ನದಗಣಿಯನ್ನು ನಡೆಸುತ್ತಿದ್ದಾರೆ ಅಂತ ಇದ್ದೆವು, ಅವರೆಲ್ಲಾ ಬರೀ ಕಾಗೇಬಂಗಾರದಂತಹವರು" ಅಂತ ಅಂದುಕೊಂಡರಂತೆ.

*             *             *

"ಪದ್ಮವಿಭೂಷಣ ತಿಸ್ರಾವರ್ಗ್ ಪಡೆದಾತ ಸೆರೆಮನೆಗೆ" (ಪತ್ರಿಕೆಯ ಮೇಲ್ಪಂಕ್ತಿ)

— ಸೆರೆಮನೆಯಿಂದ ಅರಮನೆಗೆ, ಅರಮನೆಯಿಂದ ಸೆರೆಮನೆಗೆ – ಅಲ್ಲವೇ?

*             *             *

---

# ಉರಿಗಾಳು

ಬಾಂಡ್ಛುಂಗ್ ಸಮ್ಮೇಳನಕ್ಕೆ ೨೯ ರಾಷ್ಟ್ರಗಳು ತಮ್ಮ ತಮ್ಮ ನಿಯೋಗಗಳನ್ನು ಕಳುಹಿಸಿದರು; ಆದರೆ,- ಒಬ್ಬ ಮಹಿಳೆಯನ್ನು ಕೂಡ, ಒಂದು ರಾಷ್ಟ್ರವೂ ಕಳುಹಿಸ ಲಿಲ್ಲ—ಇದನ್ನರಿತೇ ತಾವು ಅಲ್ಲಿಗೆ ಹೋಗಲಿಲ್ಲವೆಂದು ಭಾರತದ ಪ್ರಮುಖರೊಬ್ಬರು ಹೇಳುತ್ತಿದ್ದರು.

* * *

ಇಂಡಿಯಾದೇಶದಿಂದ ಹಾಕಿ ಆಟಗಾರರು ಸದ್ಯದಲ್ಲೇ ರಷ್ಯಗೆ ಹೋಗಿ ಅಲ್ಲಿ ಅವರಿಗೆ ಆಟ ಕಲಿಸಿ ಬರುವರಂತೆ.... ಪಾಪ! ರಷ್ಯನರಿಗೆ ನಾಲ್ಕು ಹಾಕಿ ಬರಲಿ.

* * *

ಹೈದ್ರಾಬಾದ್ ರಾಜ್ಯದಲ್ಲಿ ಮಾರ್ಚ ೩ಂನೆ ತಾ|| ಒಂದು ಭಾರಿಸೇತುವೆ ಮುರಿದುಬಿತ್ತು. ಅದರ ಕಾರಣವನ್ನು ಪತ್ತೆ ಹಚ್ಚಲು ಒಂದು ಸಮಿತಿ ರಚಿಸ ಲಾಗಿದೆ.... ಸೇತುವೆ ಕೆಳಗೆ ಹಳ್ಳವೊಂದಿತ್ತೆಂದೂ ಆದ್ದರಿಂದಲೇ ಅದು ಮುರಿದಿರ ಬೇಕೆಂದು ತಜ್ಞರು ಹೇಳಿಕೆ ಇತ್ತಿದಾರೆ

* * *

ಅಮೇರಿಕಾದಲ್ಲಿ ವೈದ್ಯಕೀಯ ಸಂಶೋಧನೆಗಳಿಗಾಗಿ ಭಾರತದಿಂದ ಕಪಿಗಳನ್ನು ಸಾಗಿಸಬೇಕಾದರೆ, ಕೇಂದ್ರ ಸರ್ಕಾರದ ಅನುಮತಿ ಬೇಕಂತೆ... ಅವರ ಸಂಶೋಧನೆ ಗಳಿಗಾಗಿ, ಇಲ್ಲಿಂದ ಹೋಗುವ ಶ್ರೀಮಂತ ರೋಗಿಗಳಿಗೆ ಈ ನಿರ್ಬಂಧವಿಲ್ಲ.

* * *

ಮನುಷ್ಯರು ಎಳೆಯುವ ರಿಕ್ಷಾಗಳನ್ನು ಬೆಂಗಳೂರು ಕಾರ್ಪೊರೇಷನ್ ಅಧಿ ಕಾರಿಗಳು ನಿಷೇಧಿಸಿದಾರೆ... ಆದ್ದರಿಂದ, ಹಿಂದಿನಿಂದ ತಳ್ಳುವ ವಾಹನಗಳು ಇನ್ನು ಮೇಲೆ ಬಳಕೆಗೆ ಬರಬಹುದು.

* * *

"ಸ್ಕೂಲ್ ಮಾಸ್ತರೊಬ್ಬರ ದುರಂತಮರಣ" (ಶಿರೋನಾಮೆ) ಇದೇನು ಅಂತಹ ವಿಶೇಷ ಸುದ್ದಿಯೆ? ಪ್ರತಿ ಸ್ಕೂಲ್ ಮಾಸ್ತರಿಗೂ ಆಗುವ ಅನುಭವವೇ ಇದು.

* * *

ವ್ಯವಸಾಯುವನ್ನು ಉತ್ತಮಪಡಿಸಲು ಸಹಕಾರ ವ್ಯವಸಾಯ ಕ್ಷೇತ್ರಗಳು ಜಯಪ್ರದವಾಗಿಲ್ಲವೆಂದು ಕೇಂದ್ರ ಸರ್ಕಾರ ಕಂಡುಕೊಂಡಿದೆಯಂತೆ.... ಉಳುವುದು ಬೆಳೆಯುವುದು ಒಟ್ಟಿಗೆ ಮಾಡಬಹುದು; ಆದರೆ, ಸುಗ್ಗಿ ಬಂದಾಗ, ಅವನು ಬೇರೆ, ನಾನು ಬೇರೆ....ಎಲ್ಲ ಕ್ಷೇತ್ರಗಳಲ್ಲೂ ಅಷ್ಟೆ, ಎಂದು ಮಾಜಿ ಮಂತ್ರಿಗಳೊಬ್ಬರು ಹೇಳುತ್ತಾರೆ.

* * *

"ನೀವು ಅಧಿಕಾರಕ್ಕೆ ಬಂದಕೂಡಲೇ ಮಹಾಚುನಾವಣೆ ನಡೆಯಲಿ! ಅದೇ ಉತ್ತಮ. ನಾಲ್ಕಾರು ತಿಂಗಳು ತಡಮಾಡಿದರೆ, ಅಷ್ಟರಲ್ಲೇ ನಿಮ್ಮನ್ನು ಪತ್ತೆ ಹಚ್ಚಿಬಿಟ್ಟಾರು!" ಎಂದು ಈಡನಿಗೆ ಆತನ ಅನುಯಾಯಿಗಳು ಸಲಹೆ ಕೊಟ್ಟರಂತೆ.

* * *

ದಿನಪತ್ರಿಕೆಗಳಿಲ್ಲದೆ ಬ್ರಿಟಿಷಿನವರು ಒಂದು ತಿಂಗಳು ಜೀವನ ನಡೆಸಿದ್ದನ್ನು ಕಂಡು, ಒಬ್ಬರು, ಒಳ್ಳೆಯದಾಯಿತು, ಬಿಡಿ! ಹವಾಮಾನದ ಸುದ್ದಿ, ಭವಿಷ್ಯದ ವಿಷಯ, ಹೇಳಿ ಯಾರು ನಿಮಗೆ ಮೋಸ ಮಾಡಲಿಕ್ಕಾಗಲಿಲ್ಲ, ಅದಷ್ಟು ದಿನವೂ ಎಂದರಂತೆ.

* * *

ಬೆವನ್ ಎಂಬ ಬ್ರಿಟಿಷ್ ಲೇಬರ್ ಪಾರ್ಟಿ ನಾಯಕರು ಒಂದು ಹೇಳಿಕೆಯನ್ನು ಕೊಡುತ್ತ "ನನ್ನನ್ನು ಪಾರ್ಟಿಯಿಂದ ಹೊರದೂಡಲು ಅಟ್ಲೆ ಮುಂತಾದವರು ಪ್ರಯತ್ನಪಟ್ಟರು; ಆದರೂ ನಾನು ಆ ಪಕ್ಷದ ವಿಜಯಕ್ಕಾಗಿಯೇ ದುಡಿಯು ತ್ತೇನೆ" ಎಂದರಂತೆ................ಬಲವಾದ ಎದುರು ಪಕ್ಷಗಳನ್ನು ಪ್ರತಿ ಒಂದು ಪಕ್ಷದಲ್ಲೂ ಕಟ್ಟಿ ಅದನ್ನು ಹೋಳುಮಾಡಬೇಕೆಂದು ವಾದಿಸುವ ಹಲವು ಭಾರತೀ ಯರು ಬೆವನ್‌ರವರನ್ನು ಕೂಡಲೇ ಕಂಡರೆ, ಕ್ಷೇಮ, ಎಂದು ಪ್ರಧಾನಮಂತ್ರಿ ಈಡನ್ ಹೇಳಿದರಂತೆ.

* * *

ಜಪಾನ್ ದೇಶದ ನೌಕಾದಳದ ಹೆಸರನ್ನು, "ಆತ್ಮಸಂರಕ್ಷಣಾದಳ" ಎಂದು ಬದಲಾಯಿಸಿರುವರಂತೆ........ಏಕೆ, ಅಮೇರಿಕಾದ ಸಂರಕ್ಷಣಗಳ ಎಂದೇ ಒಪ್ಪಿ ಕೊಳ್ಳಬಹುದಾಗಿತ್ತಲ್ಲಾ.

* * *

ನೀನು ಸುಳ್ಳು ಹೇಳುವುದು ಜಾಸ್ತಿ ಎಂದು ಗಂಡ ಸೂಚನೆ ಕೊಟ್ಟರೆ, 'ಮತ್ತೆ, ನಿಮ್ಮನ್ನ ಕುರಿತು ಆಗಾಗ ಒಂದೊಂದು ಒಳ್ಳೆಯ ಮಾತೂ ಆಡಬಾರದೇನು?', ಎಂದು ಆಕೆ ಕೇಳಿಬಿಡೋದೆ?

---

# ಕೊರವಾವಲೋಕನ

---

ಕುಪ್ಪು ಮನೆಯಿಂದ ತಂದ ದಿವ್ಯನಾದ ಸಕ್ಕರೆ ಪೊಂಗಲನ್ನು ಕ್ಲಬ್ಬಿನಲ್ಲಿ ನಮಗೆಲ್ಲಾ ಹಂಚಿದ. ನಮ್ಮ ನಮ್ಮ ಪಾಲಿಗೆ ಎಲ್ಲಿ ಖೋತಾ ಬೀಳುತ್ತೋ, ಸರ್ಕಾರದ ನೌಕರರ ಅಲೋಯೆನ್ಸಿನಂತೆ ಎಂದು ಪರದಾಡುವ ಗಲಾಟೆಯಲ್ಲಿ ಯಾಕೆ ಇವ ಕೈಂಕರ್ಯ ನೆರವೇರಿಸಿದ ಅಂತ ಯಾರೂ ಅವನನ್ನು ಕೇಳಲೇ ಇಲ್ಲ.

ಅರ್ಧ ತಟ್ಟೆ ಮುಗಿದಾಗ "ಬದಲ್‌ಗಯಾ ಇನ್ಸಾನ್" ಎಂದು ಸಿಳ್ಳು ಹಾಕುತ್ತಾ ಕೊರವಾ ಬಂದಿಳಿದ ಎಲ್ಲಿಂದಲೋ?

"ಏನ್ರೋ! ಇದು, ಭಾರಿ ಬಿಟ್ಟಿ ಸಂತರ್ಪಣೆ" ಎನ್ನುವ ರೀತಿಯಲ್ಲಿ ಒಂದೇ ಹುಬ್ಬನ್ನು ತಲೆಯುಂಚಿನ ತನಕ ಎತ್ತಿದ.

ಕುಪ್ಪು ಆ ವೇಳೆಗೆ ಮಿಕ್ಕ ಸಕ್ಕರೆ ಪೊಂಗಲನ್ನು ಒಂದು ತಟ್ಟೆಯಲ್ಲಿಟ್ಟು ಕೊರವನ ಕೈಗೆ, ನಾಗೋಲಿ ದಿನ ನವ ವಧು ನವ ವರನಿಗೆ ಎಲಡಿಕೆ ಮಡಿಸಿ ಕೊಡುವ ರೀತಿ, ಕೊಟ್ಟ—"ನನ್ನ ಹದಿಮೂರನೇ ಮಗು ಗಂಡಾಗಿ ಹುಟ್ಟಿತು. ಹನ್ನೆರಡು ಹೆಣ್ಣಿನ ಮೇಲೆ ಗಂಡಾದ ಖುಷಿಗೆ ಮನೇಲಿ ಮಾಡಿದ್ದನ್ನು ಇಲ್ಲಿ ಸ್ನೇಹಿತ ರಿಗೆ ಹಂಚಿದೆ" ಎಂದು ಒಕ್ಕಣೆ ಸೇರಿಸಿದ.

ಕೊರವ ಅವನಿಗೆ ಧನ್ಯವಾದ, ಆಶೀರ್ವಾದ ಇತ್ತು ತಟ್ಟೆಯನ್ನು ಮಾತಾಡದೆ ಖಾಲಿ ಮಾಡಿದ.

ನಂತರ ಎಲ್ಲರೂ ಎದ್ದು ಹೋದರು, ನಾನೂ ಕೊರವ ಇಬ್ಬರೇ ಉಳಿದು ಕೊಂಡೆವು. ದ್ರಾಕ್ಷಿ ಚೂರನ್ನು ಬೆಂಕಿ ಕಡ್ಡಿಯ ತಪ್ಪು ತುದಿಯಿಂದ ಹಲ್ಲಿನ ದೊಂಡಿಯಿಂದ ಎತ್ತಲು ವಿಶ್ವಪ್ರಯತ್ನ ಪಡುತ್ತಿದ್ದೆ. ಕಾರಣ ಕೊರವನ ಕಡೆ ನೋಡಲಿಲ್ಲ. ಅವ ಒಮ್ಮೆ ಕ್ಯಾಕರಿಸಿದ. ಆ ಶಬ್ಧವ್ಯೂಹಕ್ಕೆ ಹಲ್ಲಿನ ದೊಂಡಿ ಯಿಂದ ದ್ರಾಕ್ಷಿ ಚೂರು ಹೊರಬಿತ್ತು. ಆಗ ಕೊರವನ ಕಡೆ ನೋಡಿದೆ. ಸಕ್ಕರೆ ಪೊಂಗಲು ಚೆನ್ನಾಗಿಲ್ಲವೇ? ಎಂದ. ಒಲು ಸೊಗಸು! ಬಲು ಸೊಗಸು!! ಎಂದೆ ಮೆಲಕು ಹಾಕುತ್ತಾ.

"ಧೃತರಾಷ್ಟ್ರ ಮಹಾರಾಜ ಕೂಡ, ಗಾಂಧಾರಿ ಕೌರವರನ್ನು ಹೆತ್ತಾಗ, ಇದೇ ಸಕ್ಕರೆ ಪೊಂಗಲನ್ನು ಮಾಡಿಸಿದ್ದನಂತೆ. ಅರಮನೆಯ ಅಡಿಗೆಯವರು ಇಷ್ಟು ಕಲಾ ಕೋವಿದರಾದರೆ, ಅರಮನೆಗೆ ನಾವೇ ಅರಸರಾಗಬೇಕು ಎಂದು ಭೀಮಾರ್ಜುನರು ಅಂದೇ ಶಪಥಮಾಡಿದರಂತೆ. ಅದೇ ನೋಡು ಕುರುಕ್ಷೇತ್ರದ ಅಂತ್ಯ ಯುದ್ಧಕ್ಕೆ ಮೂಲಕಾರಣ" ಎಂದ ಕೊರವ. ನಾನು ಸರಿ ಎಂದೆ. ಕೊರವ ಬಿಡಲಿಲ್ಲ.

"ಧೃತರಾಷ್ಟ್ರ ಹುಟ್ಟು ಕುರುಡ. ಗಂಡ ಕುರುಡ ಅಂತ, ಗಾಂಧಾರಿ ಕಣ್ಣುಗಳಿಗೆ ಬಟ್ಟೆ ಕಟ್ಟಿಕೊಂಡು ಕುರುಡಿಯಂತೆಯೇ ಜೀವಿಸಿದಳು. ಕುರುಡು ಸಂಸಾರ, ನೂರೊಂದು ಮಕ್ಕಳಾದುವು.

"ಆದರೆ ಈ ಕುಪ್ಪೂಗೆ ಏನು ಬಂತು ಕುರುಡು, ಈಗಿನ ಕಾಲದಲ್ಲಿ ಹದಿಮೂರು ಮಕ್ಕಳಾದರೆ ಗತಿ? ಹೀಗಾದದ್ದಕ್ಕೆ ತಾನು ಬೇವಿನ ಎಣ್ಣೆ ಕುಡಿಯೋದು ಬಿಟ್ಟು, ನಮಗೆಲ್ಲಾ ಹಬ್ಬಮಾಡುತ್ತಾನಲ್ಲಾ! ದಿಟವಾಗಲೂ ಕುಪ್ಪುವಿನ ಸಂಸಾರ ಧೃತರಾಷ್ಟ್ರನ ಸಂಸಾರವೇ ಕಣಯ್ಯಾ?" ಎಂದು ಕೊಂಕಿದ ಕೊರವ.

—ಅಂದು ತಲೆ ಎತ್ತಿದೆ. ಕ್ಲಬ್ಬಿನ ಗೋಡೆಯ ಮೇಲೆ ಮಿತ ಸಂಸಾರಕ್ಕೆ ನಿಮ್ಮ ವೈದ್ಯರ ಸಲಹೆ ಪಡೆಯಿರಿ ಎಂದು ಜಾಹಿರಾತು ಮಾಡುವ ಬೋರ್ಡು ತೂಗಾಡುತ್ತಿತ್ತು.

ನವ ಭಾರತದಲ್ಲಿ ಧೃತರಾಷ್ಟ್ರನ ಸಂಸಾರ ಸೊಗಸುಲ್ಲ. ಅವಳಿ ಆಯ್ತು ಅಂತ ಪ್ರಾಣ ಕಳಗೊಂಡ ಪಾಂಡುರಾಜನಂತೇ ಇರಬೇಕು.

* * *

ಹೆಂಡತಿ ತೌರಿಗೆ ಹೋಗಿದ್ದಾಳೆ ಅನ್ನಿ, ಮಕ್ಕಳೆಲ್ಲಾ ಬೇಸಿಗೆಗೆ ತಾತನ ಮನೆಗೆ ಹೋಗಿದ್ದಾರೆ ಅನ್ನಿ, ಆ ದಿನ ರಜಾ ಅನ್ನಿ, ಆಗ ಮನೆಯಲ್ಲಿದ್ದರೆ ಹೇಗಿರುತ್ತೆ ಹಾಗಿರುತ್ತೆ ಕೊರವ ಕ್ಲಬ್ಬಿಗೆ ಬರದೇ ಇದ್ದರೆ. ಕಳೆದ ಮೂರು ದಿನ ಹಾಗಿತ್ತು ಕ್ಲಬ್ಬು ಬಿಕೋ ಅಂತ

ಸೋಮವಾರ ಸಾಯಂಕಾಲ ಕೊರವ ಪ್ರತ್ಯಕ್ಷನಾದ. ಹದಿನಾರು ಕಂಠಗಳು "ಒಟ್ಟಿಗೇ ಇಷ್ಟು ದಿವಸವೂ ಎಲ್ಲಿಗೆ ಹಾಳಾಗಿ ಹೋಗಿದ್ಯೊ" ಎಂದು ಒರಲಿದುವು.

"ಬಾಂಡೂಂಗ್" ಅಂತ ಕೊರವ ಹೇಳಿ "ಬರಫ್ ಪಾಣಿ"ಗೆ ಹುಕುಂ ಇತ್ತ.

"ಬಾಂಡೂಂಗಿಗೆ ನೀನು ಏಕೆ ಹೋದೆಯೋ" ಎಂದು ಮರಳಿ ಹದಿನಾರು ಕಂಠಗಳು ಒಮ್ಮೆಲೇ ಕೂಗಿದುವು. ಆಗ ಕೊರವ ಕನಿಕರವಿಟ್ಟು, ಐಸ್ ನೀರು ಕುಡಿದು ವಿಶದೀಕರಿಸಿದ.

"ನೆಹ್ರೂಜೀ ಪ್ರವಾಸಮಾಡಿದ ಏರೋಪ್ಲೇನಿನ ಚಾಲಕ ನಮ್ಮೂರಿನವ, ನಮಗೆ ಹತ್ತುದಿನದ ದಾಯಾದಿ ತಲತಲಾಂತರದಿಂದ ದಾಯಾದಿತನ ಬೆಳೆದುಬಂದಿದೆ. ಆತ ಅಂದ. ಕಾಶ್ಮೀರ್ ಪ್ರಿನ್ಸೆಸ್ ಹೋದಮೇಲೆ ನನಗೇಕೋ ಹೆದರಿಗೆ ಆಗ್ತಾ ಇದೆ. ನೀನೂ ನನ್ನ ಜತೆ ಬಂದರೆ, ಮುಸಲಾ ಏನಾದರೂ ಆದರೆ ನಮ್ಮ ಮನೆತನಗಳ ದ್ವೇಷಕೂಡ ಮುಕ್ತಾಯವಾಗುತ್ತೆ ಅಂತ. ನನಗೂ ಬೇಜಾರಾಗಿತ್ತು ಆಗಲಿ ಎಂದು ಒಪ್ಪಿ ಅಲ್ಲಿಗೆ ಹೋಗಿ ನೆಹ್ರೂಜೀನ ಬಿಟ್ಟು ತಿರುಗಿ ಬಂದೆವು." ಎಂದು

ಕಿರುಚಲ ದನಿಯಲ್ಲಿ ಮೆಲ್ಲಗೆ ಕೇಳಿದೆ. ನಿಮ್ಮ ಮನೆತನದವ ವೈಷಮ್ಯ? ಎಂದು.

"ಅದು ಮೊದಲಿದ್ದಂತೆಯೇ ಪುನಃ ಶುರುವಾಗಿದೆ" ಅಂದ.

* * *

ಹೊಸಕಾಲೆಂಡರ್ ತಯಾರಿಕೆಯ ವಿಚಾರವಾಗಿ ಬಂದಿದ್ದ ಲೇಖನಗಳನ್ನು ಕಷ್ಟಪಟ್ಟು ಮಳೆ ಬೀಳುವಂತಿದ್ದ ಸಾಯಂಕಾಲ ಕ್ಲಬ್ಬಿನಲ್ಲಿ ಓದುತ್ತಿದ್ದೆ. ಮೋಡ ಕಟ್ಟಿಕತ್ತಲು ಕತ್ತಲಾದ್ದರಿಂದ ವಿದ್ಯುಚ್ಛಕ್ತಿ ಭಯದಿಂದ ಬಂದಾಗಿತ್ತು. ಪಂಕ ಆಡುತ್ತಿರಲಿಲ್ಲ ಗಾಳಿ ಬೀಸುತ್ತಿರಲಿಲ್ಲ. ತೊಟ್ಟ ಷರಟು ಎರಡನೇ ಚರ್ಮದಂತಾಗಿತ್ತು. ಎದ್ದೇಳ ಹೋದರೆ ಕುರ್ಚಿಕೂಡ ನನ್ನ ಜತೆಯಲ್ಲೇ ಇರಲಿಲ್ಲ.

ಬುಷ್‌ಕೋಟ್ ಹಾಕಿಕೊಂಡು ಬುಷ್‌ಮನ್ ರೀತಿಯಲ್ಲಿ ಬಂದ ಕೊರವ. "ಏನೋ ಓದುತ್ತಿರೋದು ಅಂದದ ಬೊಂಬೆಗಳಿವೆಯೇ ಲೇಖನದಲ್ಲಿ" ಅಂದ ಪ್ರಗತಿಶೀಲ ಕೊರವ.

'ಕಾಲೆಂಡರ್ ರಿಫಾರಂ' ಅಂತ ಉಸುರಿದೆ.

"ಯಾಕೆ ಇಷ್ಟು ಕಷ್ಟಪಡ್ತಾರೋಪ್ಪಾ! ಈ ಸಣ್ಣವಿಷಯಕ್ಕೆ-ಮೊದಲ ತಿಂಗಳು ಲೈಸೆನ್ಸ್ ತಿಂಗಳು-ಎರಡನೇ ತಿಂಗಳು ಎಕ್ಸಿಭಿಷನ್-ಮೂರನೇ ತಿಂಗಳು ಬಡ್ಜೆಟ್ ಅಧಿವೇಷಣ. ನಾಲ್ಕನೇ ತಿಂಗಳು ರೆವಿನ್ಯೂ ಅಪೀಲುಗಳು-ಐದು ಸ್ವಂತ ಊರು—ಆರು ಸೀಟಿನ ಬೇಟೆ - ಏಳು ಅಸೆಂಬ್ಲಿ ಎಂಟು ಲೈಸೆನ್ಸ್ ತಿಂಗಳು—ಒಂಭತ್ತು ನಿಯೋಗ ಹೊರಡುವ ತಿಂಗಳು—ಹತ್ತು ಬಾಕಿವಸೂಲಿ ತಿಂಗಳು—ಹನ್ನೊಂದನೇ ತಿಂಗಳು ಸ್ವಂತಗ್ರಾಮ—ಹನ್ನೆರಡು ಆಯ್ಕೆಯ ಸನ್ನಾಹ ಅಂತ ಮಾಡಿಬಿಟ್ರೆ ದೇಶದ ನಾಯಕರು ಯಥಾರ್ಥ ಹೇಳಿದಂತೆಯೂ ಆಯ್ತು—ಪ್ರಗತಿಯನ್ನು ಸಾಧಿಸಿದಂತೆಯೂ ಆಯ್ತು ಅಧಿಕಾರದಲ್ಲಿನ ಪಕ್ಷಕ್ಕೆ ಬೇರೆ ಏನಾದರೂ ಏಕೆಬೇಕು" ಎಂದ ಕೊರವ, ಒಗ್ಗರಣೆ ಮಾತನಾಡುತ್ತಾ.

—ಹೌದಾ! ಅಂದೆ, ಮಂಗಳೂರಿನವರನ್ನು ನೆನೆದು.

---

# ಹಲಸಿನಹಣ್ಣು

---

ನಮಗೆ ಬಹಳವಾಗಿ ಬೇಕಾಗಿದ್ದ ಸಾಮಾನುಗಳನ್ನು ಎಷ್ಟೋ ಕೊಳ್ಳುತ್ತೇವೆ, ಎಷ್ಟೋ ಬಿಡುತ್ತೇವೆ. ಆದರೆ ಅತಿಶಯ ಹೆಚ್ಚಾದಷ್ಟೂ ಆ ಸಾಮಾನನ್ನು ಕೊಂಡು ಕೊಳ್ಳದಿರುವುದೇ ಹೆಚ್ಚು. ನಾನೂ ಮತ್ತು ನನ್ನಾತನೂ ಪರಸ್ಪರ ಗುಣದೋಷ ಗಳನ್ನು ಹುಡುಕಲು ಹೊರಟರೆ ಒಂದೇ ಉಸುರಿನಲ್ಲಿ 'ಹಲಸಿನ ಹಣ್ಣು' ಎಂದು ಚೀರುತ್ತಿದ್ದೆವು ಮೇಲೆ ಮುಳ್ಳಾದರೂ ಹಣ್ಣು, ಮೃದವಾದ, ಹಿತವಾದ, ರುಚಿ

ಮನೆಮಾಡಿ ಎರಡು ವರ್ಷಗಳಾಗಿದ್ದರೂ ಯಾವ ದುರ್ದೆಸೆಯಿಂದಲೋ ಒಂದು ದಿನವಾದರೂ ಇವರು ಹಲಸಿನ ಹಣ್ಣು ತಂದಿರಲಿಲ್ಲ. ಕಳ್ಳನೆಪವೋ ಸುಳ್ಳು ನೆಪವೋ, ಮನೆ ಮಾರ್ಕೆಟ್ಟಿಗೆ ಬಹಳ ದೂರ, ಯಾರಕೈಲಿ ಆ ಹಣ್ಣು ಹೊತ್ತು ತರಲಾಗುತ್ತೆ ಎಂದು ಅವರ ಮನಸ್ಸನ್ನು ಅವರೇ ಸಮಾಧಾನ ಪಡಿಸುತ್ತಿದ್ದರೇನೋ?

ಒಂದುದಿನ ಸಾಯಂಕಾಲ ಆರಾಮ ಕುರ್ಚಿಯಲ್ಲಿ ಕುಳಿತು ನಾನು ಕಸೂತಿ ಕೆಲಸಮಾಡುವುದನ್ನೇ ನೋಡುತ್ತಿದ್ದರು. 'ಕೊಳಲಾ ೨ ೨ ೨ ನ್ನುದ್ದುವ್ವೊ' ಎಂಬ ಹಾಡು ಹೇಳು ಎಂದು ಹೇಳಲೇ ಬೇಡವೇ, ಎಂದು ಮನಸ್ಸಿನಲ್ಲೇ ತರ್ಕಮಾಡು ತ್ತಿದ್ದೆ, ನಾನು. ನನ್ನಾತನ ಕಂಠ ಬಲುಹಿತ–ಆದರೆ ಹಲಸಿನ ಹಣ್ಣು ಜ್ಞಾಪಕಕ್ಕೆ ಬಂತು

ಥಟಕ್ಕನೇ ಕತ್ತೆತ್ತಿ ಶುರುಮಾಡಿದೆ.

"ನಾನೂ, ಗುಳ್ಳಪ್ಪ, ನಿನ್ನೆ....;"

"ನೀನೂ; ಯಾರೂ?" ಎಂದರು ದೊಡ್ಡದಾಗಿ ಬಾಯಿಬಿಟ್ಟು.

"ನಮ್ಮ ಮನೆಕೆಲಸಮಾಡುವ ಪುಟ್ಟ ಹುಡುಗ ಅಂದ್ರೆ. ನೀವೇನೋ 'ಹುಡುಗ, ಹುಡುಗ' ಅಂತ ಕರೀತೀರಿ, ಆದರೆ ಅವನ ಅಪ್ಪ ಅಮ್ಮ ಅವನಿಗೆ ಹೆಸರು ಇಟ್ಟಿದ್ದಾರೆ ಗುಳ್ಳಪ್ಪ ಅಂತ"

"ಸರಿ, ನೀನು, ಗುಳ್ಳಪ್ಪ ಏನು?" ಎಂದರು, ಹುಬ್ಬು ಗಂಟಿಕ್ಕಿ.

"ನಾನು ಗುಳ್ಳಪ್ಪನ್ನ ಕರೆದುಕೊಂಡು ಹೀಗೇ ಹೋಗಿ ಹಾಗೇ ಮುಂದಿನ ಬೀದೀಲಿ ಬಂದೆ. ಆ ಕೊನೇ ಮನೆ ಇದೆಯಲ್ಲ, ಮುಂದಿನ ಬೀದೀಲಿ, ಅಲ್ಲಿ ಎಷ್ಟು ದೊಡ್ಡ ಹಲಸಿನಮರ ಇದೆ ಅಂತ ಹಣ್ಣು ಕೈಗೇ ಎಟಕಿಸುವಂತೆ ಬಿಟ್ಟಿದೆ."

"ಎಟ್ಕಿಸಿದರೂ ನಾನು ಕಿತ್ತುವುದಿಲ್ಲ" ಎಂದರು ನಿರ್ಧರವಾಗಿ.

"ಸದ್ಯ, ಇನ್ನು ನೀವು ಕಿತ್ತು ಜೈಲಿಗೆ ಹೋದರೆ ನಾನೇನುಮಾಡಲಿ. ನಾವು ಹೇಳೋದು, ನೀವು ಆ ಮನೆಯಾತನ ಸ್ನೇಹ ಏಕೆ ಬೆಳಸಬಾರದು ಅಂತ"

"ಆ ಮನೆಯಾತನ !! ಹೌದು! ಅದೀಗ ಸರಿ! ನಾಳೆಯೇ ವಿಚಾರಿಸುತ್ತೇನೆ ತಾಳು" ಎಂದು ಹೇಳಿ ಈ ಸಮಾಚಾರವನ್ನು ಮುಗಿಸಿದರು.

* * *

ನಾಲ್ಕೈದು ದಿನಗಳಾದಮೇಲೆ ತಿರುಗಿ ಅದೇ ಪ್ರಸ್ತಾಪಕ್ಕೆ ಬಂದೆವು.

"ಸ್ನೇಹದ ಬೀಜವೇನೋ ಬಿತ್ತಿದ್ದೇನೆ. ಇನ್ನು ಅದನ್ನು ಬಲಿಸಿ ಗಿಡಮಾಡು ವುದು ನಿನ್ನ ಭಾರ" ಅಂದರು.

"ನಾನೇನುಮಾಡಲಿ...." ಎಂದೆ.

"ಉಹ್ಞಾ, ನೋಡು ಆ ಪಕ್ಕದಮನೆ ಸಂಪಿಗೆಮರದ ರೆಂಬೆ ನಮ್ಮ ಮನೆಕಡೆ ಬಂದಿದೆಯಲ್ಲ. ಸ್ವಲ್ಪ ಹೂಕಿತ್ತು, ಆ ಕುಳ್ಳಪ್ಪನೊ ಗುಳ್ಳಪ್ಪನೋ ಇದ್ದಾನಲ್ಲ ಅವನಕೈಲಿ ಕೊಟ್ಟು ಕಳುಹಿಸು ನನ್ನ ಹೊಸಸ್ನೇಹಿತನ ಮನೆಗೆ ಎಂದರು. ಸಲಹೆ ಯನ್ನು ಚಾಚೂತಪ್ಪದೆ ನಡೆಸಿದೆ.

* * *

ಭಾನುವಾರ ಮಧ್ಯಾಹ್ನ ನಿದ್ದೆಮಾಡುತ್ತಿದ್ದಾಗ 'ಹಲಸಿನ ಹಣ್ಣು' ಎಂದು ಯಾರೋ ಜೋರಾಗಿ ಕೂಗಿದಂತಾಯ್ತು. ಎದ್ದುಹೋಗಿ ನೋಡುವಲ್ಲಿ, ಅದು ಕನಸಾಗಿರಲಿಲ್ಲ ಒಂದು ದೊಡ್ಡ ಹಣ್ಣು ಹೊತ್ತು ಒಬ್ಬ ಹುಡುಗ ಬೀದಿಯಲ್ಲಿ ಕೂಗಿಕೊಂಡು ಹೋಗುತ್ತಿದ್ದ ಚಪಲ ಕೆರಳಿತು. ಕರೆದೆ ಹುಡುಗನ್ನ.

"ಒಂದೇ ಮಾತು ತಾಯೀ ಎರಡು ರೂಪಾಯ್" ಎಂದ.

"ಒಂದು ರೂಗೆ ಕೊಡದಿದ್ದರೆ ಹೋಗಲಿಬಿಡು ಮುಂದಿನ ಬೀದಿ ಕೊನೆಮನೆ ಯವರು ಹೇಗೂ ಕಳುಹಿಸುತ್ತೇನೆ ಎಂದು ಹೇಳಿದ್ದಾರೆ," ಎಂದರು ಎದ್ದುಬಂದ ಇವರು.

"ಮುಂದಿನಬೀದಿ ಹಣ್ಣೆತಾಯಿ ಇದು ಆ ಮರ ಗುತ್ತಿಗೆಗೆ ನಾನು ತೊಗೊಂಡು ಮೂರುವರ್ಷವಾಯಿತು. ಮನೆಮಾಲೀಕನಿಗೆ ಇದೇ ಹಣ್ಣನ್ನು ಮೂರು ರೂಪಾ ಯಿಗೆ ಕಡಿಮೆ ಕೊಡುತ್ತಿರಲಿಲ್ಲ."

ಹಣ್ಣು ನೋಡುತ್ತಿದ್ದಂತೆ ನಮ್ಮ ಆಸೆಯೂ ಹೆಚ್ಚಿತು. ಕೂಡಲೆ ಒಳಗೆ ಹೋಗಿ ಎರಡು ರೂಪಾಯಿ ತಂದು ಹಣ್ಣನ್ನು ಕೊಂಡುಕೊಂಡೆ.

ಸರಿ, ತಿಂದೆವು, ಕಂಠಪೂರ್ತಿ ಜೇನುತುಪ್ಪಹಾಕಿ ಉಂಡೆವು. ಮುಚ್ಚುಮರೆ ಏಕೆ, ಹೊಟ್ಟೆನೋವು ಬರುವ ತನಕ ತಿಂದೆವು. ಮೂರನೆಯದಿನ ಔಷಧಿ ತರಹೋರ ಟಾಗ ಹಲಸಿನ ಮರದ ಮನೆಯಾಕೆ ಸಿಕ್ಕಿದಳು. ನಾನು ನೋಡದವಳಂತೆ ನಟಿಸಿ ದರೂ ಆಕೆಯೇ ಮುಂದೆಬಂದು.

"ನೀವು ಕಳುಹಿಸಿದ ಹೂ ಬಹಳ ಚನ್ನಾಗಿತ್ತು, ನಿನ್ನೆದಿನ ನಿಮಗೆ ಒಂದು ಹಲಸಿನ ಹಣ್ಣು ಕಳುಹಿಸೋಣ ಅಂತಿದ್ದೆ. ಆದರೆ ಯಾವ ಮಾಯದಲ್ಲೋ ಯಾವನೋ ಪಾಪಿ ಕದ್ದುಬಿಟ್ಟಿದ್ದ. ಇನ್ನೊಂದು ಹಣ್ಣು ಮಾಗಿದಕೂಡಲೇ ಕಳುಹಿಸುತ್ತೇನೆ" ಎಂದಳು

ಹೊಟ್ಟೆನೋವು ಹೊಟ್ಟೆಯುರಿಯ ಮೇಲೆ ಬಂದು ಎದೆಯನ್ನು ಮುಟ್ಟಿ ತಿವಿಯುತ್ತಿತ್ತು.

"ಇಂದುಮತಿ"

## ಐನ್‌ಸ್ಟೀನರನ್ನು ಕುರಿತು

ಕವಿ ಚಕ್ರವರ್ತಿ ಓ ಐನ್‌ಸ್ಟೀನ! ಮರೆಯಾದೆಯೇಕಿಂತು?
ಲೋಗರೆಲ್ಲರು ನಿನ್ನ ತೆಗಳುತಿಹರಕಟಕಟ! ವಿಜ್ಞಾನಿ
ನೀನೆಂದು ನಿಂದಿಪರು ನಿನ್ನ ನಿಂದು.

ಸಾಪೇಕ್ಷವಾದವನು ವಿವರಿಸಿದ ಮಹನೀಯ
ನೀನಂತೆ, ಅಣುಬಾಂಬು ನಿನ್ನ ದೆಸೆಯಿಂದಂತೆ
ಎಂಥ ಜನರಿವರೆಲ್ಲ? ಸಂತೆಯಲಿ ಮೆಂತ್ಯವನು ಕದಿವ ಜನರು.

ಅಲ್ಲಿ ಪ್ರಿನ್ಸ್‌ಟನ್ನಿನಲಿ, ಓಕ್ ವೃಕ್ಷದಡಿಯಲ್ಲಿ
ಕುಳಿತು ವಿಶ್ವವ, ಜನನ ಮರಣಗಳ ಮಾನವನ
ಸುಖದುಃಖಗಳ ಪಾಡುತ್ತಿದ್ದ ಕವಿ ಕೋಗಿಲೆಯು
ನೀನಲ್ತೆ, ನೀನು ವಿಜ್ಞಾನಿಯಲ್ಲ.

ಪ್ರೇಮಗೀತೆಗಳನ್ನು ಸೃಷ್ಟಿಪರೆ ಷೇಕ್ಸ್‌ಪಿಯರ‍್
ಕಾಳಿದಾಸರು ನಿನ್ನ ಕಂಡು ಬೆದರುವರು
'ಪ್ರೇಯಸಿಯ ಸಂಗದಲಿ ಯುಗವೊಂದು ಕ್ಷಣ
ಅದುವೆ ವಿರಹಾಗ್ನಿಯಲಿ ವೈಶಿವರ್ಷ'.

— ಅ. ರಾ. ಸೇ.

ಆಧಾರ:—When you sit with the girl you love for two hours you think it is only a minute. But when you sit on a red hot stove for a minute, you think it is two hours. That is relativity–Einstein.

# ಯುಗದೇವಿ

---

ಕಟ್ಟಿದರು ಶಿಲ್ಪಿಗಳು
ಯುಗಯುಗದ ತಿಳಿವಿನಾಳವ ಬಗೆದು, ಕೆದಕಿ, ಬೆದಕಿ,
ಆಧುನಿಕತೆಯ ಆದರ್ಶದಲಿ
ಕಟ್ಟಿದರು ಸೌಧವನು!
ತುಂಬಿದರು ತಮ್ಮೆಲ್ಲರೆದೆಯ ಸತ್ವವನು!

ಬಂದು ನೆಲಸಿದಳಲ್ಲಿ ರಾಜ ರಾಜೇಶ್ವರಿಯು
ಫ್ಯಾಷನ್ನಿನಧಿಧಾತ್ರಿ ನವಜಗದ ಯುಗದೇವಿ!
ಶಿಲ್ಪಿಗಳು, ಕಾರ್ಮಿಕರು ಎಲ್ಲರೂ ಹಿಗ್ಗಿದರು
ತಮ್ಮ ಸೃಷ್ಟಿಗೆ ತಾವೆ ಮೆಚ್ಚಿದರು; ಬೆಚ್ಚಿದರು.
ಮುನ್ನುಗ್ಗಿದರು ಎಲ್ಲರೂ
ಯುಗದೇವತೆಯ ಸೇವೆಯಲಿ ಮಗ್ನರಾದರು ಎಲ್ಲ
ಅವಳ ಮನದಾಳವನ್ನರಿತು ಸೃಷ್ಟಿಸಿದರೆಲ್ಲವನು!
ತುಟಿಗೆಂಪು, ಸ್ನೋ ಪೌಡರುಗಳ,
ಜಾಹಿರಾತುಗಳ, ಬಣ್ಣಗಳ,
ಸಂತೆ ನೆರೆಯಿತು ಸೌಧಧ ಮುಂದೆ!
ಹಾಜರಾದರು ಎಲ್ಲ ಸೌಂದರ್ಯ ದರ್ಶನಕೆ,
ದಿವ್ಯ ಪುಣ್ಯಾರ್ಜನೆಗೆ!

ಬೆರಗಾದನಾ ಬ್ರಹ್ಮ! ಪೆಚ್ಚಾದರಾ ಹರಿಹರರು!
ತಾವರಿಯದೇನೇನವೋ ಸೃಷ್ಟಿಸಿದೆ ಮಾನವತೆ!
ಇದು ವಿಜ್ಞಾನಯುಗ
ನಾಗರೀಕತೆಯ ತುತ್ತ ತುದಿಯಲ್ಲಿದೆ ಈಗ.

ಬಂದಳಾಮಣಿ ಹೊರಗಡೆಗೆ!
ಜಗವೆ ಕಾದಿತ್ತವಳ ನಡೆವೆಡೆಗೆ!
ಕಿಂಕಾಪು ರೇಸಿಮೆಯ ನಡೆಮುಡಿಯು
ಧನ್ಯವಾಯ್ತವಳ ಪದ ಸೋಂಕಿನಲಿ!

ತವ್ಮ್ನ ನೊಲಿಯುವಳೆಂದು ಗಂಡಿನಾ ಸೇನೆ
ಹಿಂಡ ಹಿಂಡಿನಲಿ ಹೊರಟಿತ್ತು.
ಅವಳ ಒನವೊ ಒಯ್ಯಾರವೋ!
ವೈಯ್ಯಲಿತೆ ಬಳುಕೋ!
ಸಿರಿಮೆಯ್ಯ ಮಾಟವೋ!
ಅವಳ ನಡೆನುಡಿಯೋ!
ಸರ್ವಾಲಂಕಾರದಲಿ ಮೆರೆದಳಾ ಕನ್ನೆ!
ತನ್ನ ಸೌಂದರ್ಯದಲಿ ಹಿಗ್ಗಿದ್ದಳಾ ಧನ್ಯೆ!

ಹಾದಿಯಲಿ ನಾಯಿ, ಬಾಲವನ್ನಾಡಿಸಿತು,
ಹರ್ಷದಲಿ ಬೌ ಬೌ ಬೌ ಎಂದಿತ್ತು;
ಆಗಸದಿ ಹದ್ದುಗಳ ತಂಡ ಸ್ವಾಗತಿಸಿತು;
ಹಾಡಿದವು ಕಾಗೆಗಳು;
ಗರಿಗೆದರಿ ನೃತಿಸಿದುವು ಹುಂಜಗಳು
ಬಣ್ಣ ಬಣ್ಣದಲಿ ಮೆರೆದಳಾ ಕನ್ನೆ
ನವಯುಗದ ಮನದನ್ನೆ.

ಶ್ರೀಮಾತೆ ಸೀತೆ, ಸಾವಿತ್ರಿ ದಮಯಂತಿ
ಅರುಂಧತಿಯರೆಲ್ಲರೂ 'ಆದರ್ಶ ರಮಣಿ'
ಎಂದು ಹೊಗಳಿದರು! ಇವಳ ಅವತಾರಕ್ಕೆ
ಹಿಗ್ಗಿ ಆನಂದಿಸಿದರು!
ಅವರ ಜನ್ಮ ಸಾರ್ಥಕತೆಗೆ
ಇವಳವತಾರವೇ ಸಾಕ್ಷಿ!

ಅವಳೈತರುವ ಸುಂದರ ದೃಶ್ಯವನು ಕಂಡು
'ಧನ್ಯೋಽಸ್ಮಿ' ಎಂದನಾ ಬ್ರಹ್ಮ!
'ಹರ್ಷೋಽಸ್ಮಿ' ಎಂದನಾ ವಿಷ್ಣು!
ಮೌನದಲಿ ತಲೆದೂಗಿದನಾ ಶಿವನು!

'ಮಿಸ್‌ಯುಗ ದೇವಿ' ಜಯ ಜಯಾ!
ಎಂದು ಜಗವೆಲ್ಲ ಅರಚಿತ್ತು
ಗಂಟಲೊಣಗುವ ವರೆಗೂ.

—ಲ. ನ. ಹುರುಗಲವಾಡಿ.

# ಬದಲಾವಣೆ

ದೊಡ್ಡ ಸಾಹೇಬರಿಗೆ ಹೀಗೆ ಬರೆದು ಕಳುಹಿಸಿ, ತೆಪ್ಪಗೆ ಮನೆಯಲ್ಲಿ ಕೂತೇ ಬಿಡೋಣ, ಅಂತಿದ್ದ. "ಸ್ವಾಮಿ! ತಮ್ಮ ದುರಹಂಕಾರವನ್ನು ಇನ್ನು ತಡೆಯುವುದ ಕ್ಕಾಗುವುದಿಲ್ಲ. ನಾನೂ **ತಮ್ಮ** ವಿಶ್ವವಿದ್ಯಾಲಯದ **ತಮ್ಮ** ಬಿ ಎ ಡಿಗ್ರೀದಾರ, ನೆನಪಿರಲಿ. ಹದಿನೈದು ವರ್ಷ ಈಚಿನದು, ಸರಿ! ಆದರೂ, ಅದು ನನ್ನ ತಪ್ಪಲ್ಲ, ತಮ್ಮ ದೊಡ್ಡಸ್ತಿಕೆಯಿಂದಲೂ ಅಲ್ಲ. ಆದರೂ, ತಾವು ... ಏಕೆ? ಇನ್ನು ನಾನು ತಮ್ಮನ್ನು ತಾವು ಎಂದು ಹೇಳಬೇಕಾಗಿಯೇ ಇಲ್ಲ, ನೀವು ...ವಯಸ್ಸಿನಲ್ಲಿ ಹಿರಿಯರು, ಆದ್ದರಿಂದ, ನೀವು, ಇಲ್ಲದಿದ್ದರೆ, ನೀನು ಎಂತಲೇ ಬರೆಯುತ್ತಿದ್ದೆ... ನನ್ನನ್ನ ಮೊನ್ನೆ ಹೀನಾಮಾನಾ . ನಿಮಗೇನು? ತಲೆಯೊಳಗೆ ಬುದ್ಧಿ ಅನ್ನೋದು....? ಆ? ನಾಚಿಕೆ, ಗೀಚಿಕೆ, ಕಾಲ ದೇಶ ಪರಿಸ್ಥಿತಿಗಳ ಅರಿವು, ವಿವೇಚನೆ ವಿವೇಕ? .... ಎಲ್ಲ ಸೊನ್ನೆ, ನಿಮಗೆ " ಇತ್ಯಾದಿ.

ಆದರೆ, ಆಫೀಸಿಗೆ ಹೋಗಿ, ದೊಡ್ಡ ಸಾಹೇಬರೆದುರು ನಿಂತು ಅವನು ಹೇಳಿದ್ದು: "ಕ್ಷಮಿಸಿ, ಸಾರ್! ತಿಳಿಯದೆ, ಹಾಗೆಲ್ಲ ಮಾಡಿಬಿಟ್ಟೆ. ತಾವು ಕಾಪಾಡಬೇಕು, ಇಲ್ಲದಿದ್ದರೆ, ಹೆಂಡತಿ ಮಕ್ಕಳ ಪಾಡು ನಾಯಿಪಾಡು....ಇನ್ನುಮೇಲೆ ಇಂಥದ್ದಾಗು ವುದಿಲ್ಲ, ಸಾರ್! ಈಚೆಗೆ ವಿದ್ಯಾಭ್ಯಾಸದ ಮಟ್ಟವೇ ಇಳಿದುಹೋಗಿದೆ ಸಾರ್! ನಾನು ಬರೀ ಗ್ರೇಸ್ ಮಾರ್ಕ್ಸ್‌ನಿಂದಲೇ ಪಾಸು. ಸಾರ್!"

* * *

ಮನೆಗೆ ಹೋಗಿ, ಅವಳ ಹತ್ತಿರ : "ಲೇ! ನನ್ನ ಸಂಬಳ ಎಷ್ಟು ಎಂಬೋದನ್ನ ನಿನಗೆ ಸಾವಿರಸಲ ಹೇಳಿದೇನೆ. ಇವತ್ತು ಇಗೋ ಪ್ರಮಾಣವಾಗಿ ಈ ಮಗು ತಲೆಯ ಮೇಲೆ ಕೈ ಇರಿಸಿ ಹೇಳುತ್ತೇನೆ ....ಚಿಲ್ರೆ ಪಲ್ರೆ ಎಲ್ಲ ಸೇರಿಸಿ, ಕಿತ್ತುಕೊಳ್ಳೋದು ಕೇಳಿ ಇಸುಕೊಳ್ಳುವುದು ಎಲ್ಲ ಸೇರಿಸಿ, ಕೈಗೆ ಬರುವುದು ೮೨-೬-೦, .. ಕೇಳಿಸಿತೇನೆ ೮೨-೬-೦. ಇನ್ನು ನೀನೇ ಲೆಕ್ಕ ಹಾಕಿನೋಡು....ಆ ದರಿದ್ರ ಪುಸ್ತಕಾನ, ಹೊಲಸು ಕಾದಂಬರೀನ, ಕತ್ತಲೇಲಿ ಯಾರಿಗೂ ಕಾಣಿಸದೆ ಓದಬೇಕಾದ ಅಸಹ್ಯಾನ .. ನೀನು...." ಇತ್ಯಾದಿ ಹೇಳಬೇಕೆಂದಿದ್ದ.

ಅದರೆ, ಮನೆಗೆ ಹೋಗಿ, ಈಸಿಚೇರ್‌ಮೇಲೆ ಮಲಗಿ ಹೇಳಿದ್ದು, "ಲೇ! ಹುಡುಗರು ಯಾರೂ ಇಲ್ಲ ಮನೆಯಲ್ಲಿ ಈಗ .. ಆ ಕಾದಂಬರಿ ತೆಗೆದುಕೊಂಡು ಬಾ.... ಕೊಂಚ ಓದುತ್ತೇನೆ ಲೀಲು ಬರುವುದರೊಳಗೆ, ಸಂಗೀತದ ಕ್ಲಾಸಿಂದ" ಎಂದ.

ಅವನು ಹೇಳಲು ನಿರ್ಧರಿಸಿದ್ದು : "ಥತ್! ಏನಯ್ಯ ಇದು, ಮೂರು ಹೊತ್ತೂ ಇಸ್ಪೀಟ್ ಆಟ! ಮನುಷ್ಯ ಜನ್ಮಕ್ಕೆ ಇವೇನೆ ಸಾರ್ಥಕ? ಒಂದು ಓದಿಲ್ಲ, ಭಜನೆ ಇಲ್ಲ,

* * *

ಪಾಠವಿಲ್ಲ ಪ್ರವಚನವಿಲ್ಲ ಇದಕ್ಕಿಂತ ತೆಪ್ಪಗೆ ಒಂದು ಪುಸ್ತಕ ಹಿಡಿದು ಕೂರಬಾರದೆ? ಹಾಯಾಗಿ ಗಾಳಿ ಕುಡಿತಾ ವಾಕಿಂಗ್ ಹೋಗಬಾರದೆ? ಹತ್ತುಜನ ಕೂತು ಹರಟೆ ಬಾರದೆ? ಕಾಸೂ ನಷ್ಟ, ಗಂಟಲೂ ಹಾಳು, ಕೆಮ್ಮೊ ಜಾಸ್ತಿ, ಕತ್ತಲೆಕೋಣೆಯೊಳಗೆ ಸಿಗರೇಟ್ ಹೊಗೆ ಕೆಳಗೆ ಕಾರ್ಡು ಹಿಡಿದು ಕಾದಾಡುವುದು .. ನಾನಿಲ್ಲಪ್ಪ, ಇವತ್ತಿನಿಂದ.

ಹೇಳಿದ್ದು: "ಕಲಸಿಹಾಕೊ, ಬೇಗ!"

* * *

ಅವನು ಭಾಷಣಮಾಡಬೇಕೆಂದಿದ್ದದ್ದು: ಮಹನೀಯರೆ! ನಾನು ಇಡೀ ದೇಶಕ್ಕಾಗಿ ದುಡಿಯುವವ; ಇಡೀ ದೇಶದ ಏಳಿಗೆ ಯಾವ ರಾಜ್ಯ ನೀತಿಯಿಂದ ಆಗುತ್ತದೋ ಅದಕ್ಕೇ ನನ್ನ ಬೆಂಬಲ ... ಮಹನೀಯರೇ! ಚಿಕ್ಕ ಪುಟ್ಟದು ಯಾವುದೂ ನನ್ನನ್ನು ದೇಶಸೇವೆ, ಇಡೀ ರಾಷ್ಟ್ರದ ಸೇವೆಯಿಂದ ತಿರುಗಿಸಲಾರವು .. . . ಇದನ್ನು ನೀವು ನೆನಪಿನಲ್ಲಿಡಿ....ನಾನು ಗಾಂಧೀ ಸೇವಕ-ಲೋಕ ಸೇವೆಯೇ ನನ್ನ ಧ್ಯೇಯ"

ಹೇಳಿದ್ದು: "ಮಹನೀಯರೇ! ನಮ್ಮ ಕೋಮಿನವರು ಪ್ರತಿನಿಧಿ ಸಭೆಯಲ್ಲಿ ಕೇವಲ ಕೆಲವೇ ಜನ....ಅವರಿಂದ ನನ್ನ ಕೋಮಿನ ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸಲು ಸಾಧ್ಯವೆ? ಉಳಿದ ಕೋಮಿನವರಿಗಾಗಿ ವೆಚ್ಚವಾಗುತ್ತಿರುವ ಹಣದ ಬಹುಭಾಗ ನಮ್ಮ ಕೋಮಿನವರಿಗೇ ಮೀಸಲಾಗಬೇಕಲ್ಲವೆ? ಯೋಚಿಸಿ....ಅನಂತರ, ಓಟುಮಾಡಿ".

* * *

—ಕಾಮತ್.

---



ಇದೇನೋ! ಹನ್ನೆರಡು ಗಂಟೆಗೇನೋ ಕಸ ಹೊಡಿಯೋದು?
ದಿನಾ ಮಾಡೋ ಹಂಗೇ ಇವತ್ತೂ ಮಾಡ್ತಿದ್ದೇನೆ ಬುದ್ಧಿ!
ನೀವೇ! ಯಾಕೋ! ಬೇಗ ಬಂದ್ಬುಟ್ರಲ್ಲಾ ಬುದ್ಧಿ!!

# ಬೈಲೂರಾದಮೇಲೆ

ನಮಗೆ ಶಾಂತಿ ಎಲ್ಲೂ ಸಿಗುವಂತಿಲ್ಲ. ಬೈಲೂರು ಶಾಲೆಯಲ್ಲಿ ಹಿಂದಿ ಮುಗಿದ ಮೇಲೆ ಶಾಂತಿ ಸಿಗಬಹುದೆಂದು ಮಲಗಿದೆವು. ನಿದ್ರೆ ಹತ್ತಲಿಲ್ಲ. ಮೈಯೆಲ್ಲಾ ನವೆ ಶುರುವಾಯ್ತು. ನವೆಗೆ ತಕ್ಕಶಾಂತಿ ಮಾಡಿ–ಕೈಗಳು ಸುಸ್ತಾದವು. ನವೆಗೆ ಕಾರಣ ಪೂರ್ತಿ ವಿಚಾರಣೆ ಮಾಡೋಣವೆಂದು ಎದ್ದು ಕೈಟಾರ್ಚು ಹಚ್ಚಿ ನೋಡಿದೆ. ಜಿರಳೆ ಮರಿಗಳ ಹಾಗೆ, ಅಷ್ಟೇ ದೊಡ್ಡ ದೊಡ್ಡ ತಿಗಣೆಗಳು ನನ್ನ ಹಾಸಿಗೆಯ ಮೇಲೆಲ್ಲಾ ರಾಜಾರೋಷವಾಗಿ ಓಡಾಡುತ್ತಿವೆ! ಒಂದು ಹತ್ತು ನಿಮಿಷ ಅವುಗಳ ವಿಚಿತ್ರಪ್ರಪಂಚದ ರಚನೆಯಲ್ಲಿ ಮುಗ್ಧನಾಗಿ ಹಾಗೇ ಆ ತಿಗಣೆಗಳ ಆಟ ನೋಡುತ್ತಾ ನಿಂತೆ. ಬೈಲೂರಿನ ತಿಗಣೆ, ಸಾಧಾರಣ ತಿಗಣೆ ಅಲ್ಲಿ ಎನ್ನಿಸಿತು. ಮಿಕ್ಕ ಊರುಗಳ ತಿಗಣೆಗಳ ಹಾಗೆ ಏನೋ ತಮ್ಮ ಹೊಟ್ಟೆಪಾಡಿಗೆ ರಕ್ತ ಕುಡಿದು ಮಲಗುವ ಪ್ರಾಣಿಗಳಲ್ಲ! ಇವು ನಿಜಕ್ಕೂ ತಮ್ಮ ಸಮಾಜವನ್ನು ಸುಧಾರಿಸಿ ಕೊಂಡಿವೆ. ಅವುಗಳ ತಂಟೆಗೇ ಹೋಗದೆ, ತನ್ನಷ್ಟಕ್ಕೆ ತಾನು ತಾನು ಹೊತ್ತ ಪಾಪದ ಹೊರೆಯನ್ನು ಹೊತ್ತು ಕಾಲಕಳೆದು, ಏನೋ ಒಂದೆರಡು ಘಂಟೆ ಈ ಶಾಲೆಯಲ್ಲಿ ಮಲಗುವ ಎಂದು ಯೋಚಿಸಿದ್ದ ಬಡ-ನನ್ನನ್ನು ವೃಥಾ ಕೆರಳಿಸಿ, ನನ್ನ ರಕ್ತ ಹೀರುವ ಚಾತುರ್ಯ ಇರಬೇಕಾದರೆ— ಈ ತಿಗಣೆಗಳು ರಾಜಕೀಯದಲ್ಲಿ ಎಷ್ಟು ಮುಂದುವರಿದಿರಬಹುದು!—ನೀವೇ ಯೋಚಿಸಿ. ಯಾವ ರಾಜ್ಯದಲ್ಲೂ, ಯಾವ ರಾಜಕೀಯ ಪಕ್ಷದಲ್ಲೂ, ಯಾವ ಮಂತ್ರಿತ್ವಕ್ಕೂ ಸಾಕಷ್ಟು ಚಾತುರ್ಯ ಇದೆ! ಇಲ್ಲಿಯ ತಿಗಣೆ, ಮನುಷ್ಯನ ರಕ್ತದ ಜೊತೆಗೆ ಡೀಡೀಟಿಯನ್ನೂ ಜೀರ್ಣಿಸಿ ಕೊಂಡು ಬೊಜ್ಜು ಬೆಳಿಸಿ ಕೊಬ್ಬಿವೆ—

"ಲೋ!–ಇಲ್ಲಿ ತಿಗಣೆ ಇದ್ದಹಾಗಿದೆ!" ಎಂದು ಅರಚುತ್ತ ಎದ್ದ ರಾಜ

"ಹೌದು" ಅಂದೆ.

"ಮೊದಲೇ ನನಗೇಕೆ ಹೇಳಲಿಲ್ಲ?" ಅಂದ ರಾಜನ ಮನಸಿನಲ್ಲಿ ನಾನು ಬೇಕಾಗಿಯೇ ಅವನ ಸಂತೋಷಕ್ಕಾಗಿ ಈ ತಿಗಣೆಗಳ ಆಟ ಏರ್ಪಡಿಸಿದ್ದೇನೆಂದು ಕೊಂಡಿದ್ದ ಹಾಗಿತು.

"ನನಗೂ ಮಲಗಿದಮೇಲೇ ತಿಳಿದಿದ್ದು" ಅಂದೆ

"ಹಾ!—ಲೋ-ನಾಪತ್ತೆ- ಏನೋ ನೋಡ್ರೋ-" ಅಂತ ತನ್ನ ಹಾಸಿಗೆಯಿಂದ ಹಾರಿದ ಚಂದಿ

ಮೂವರೂ ಅಂದು ರಾತ್ರಿ ಶಾಲೆಯ ವರಾಂಡಾದಲ್ಲಿ ಕಳೆದೆವು.

ಹಿಂದೆ ಒಂದುಸಾರಿ ರಾಜನ ಮನೆಗೆ ತಿಗಣೆ ಸೇರಿದ್ದವು. ಆಗಿನ ಕಾಲದಲ್ಲಿ ಡೀಡೀಟಿ ಇರಲಿಲ್ಲ. ತಿಗಣೆಗಳೂ ಇಷ್ಟು ಕೊಬ್ಬಿರಲಿಲ್ಲ ಏನೋ ಪಾಪ-ಕಂಡೂ ಕಾಣದ ಹಾಗೆ ಒಬ್ಬ ಬಡ N. G O. ಮನೇಗೆ ಸಂಕೋಚವಾಗಿ ಸೇರಿಕೊಂಡು ತಮ್ಮಷ್ಟಕ್ಕೆ ತಾವು ಇರುತ್ತಾ ಇದ್ದಕಾಲ. ಅವು ಪಾಪ-ಆ ಬಡನೌಕರನ ಗೋಳು ಜೀವನದಲ್ಲಿ ಸ್ವಲ್ಪವಾದರೂ ಹುಮ್ಮಸ್ಸು ತರುವುದಕ್ಕೇ ವಿನಹ ಬೇರಾವ ಕೆಟ್ಟ ಯೋಚನೆಯಿಂದಲೂ ಅವನ ಮನೆ ಸೇರುತ್ತಿರಲಿಲ್ಲ ರಾಜಕೀಯ ಜ್ಞಾನವಂತೂ ಸುತರಾಂ ಇರುತ್ತಿರಲಿಲ್ಲ. ಆದರೂ ರಾಜನ ಮನಸ್ಸಿಗೆ ಸರಿಬೀಳಲಿಲ್ಲ ಏನೇನೋ ಉಪಾಯಮಾಡಿದ-ಏನೂ ಪ್ರಯೋಜನವಾಗಲಿಲ್ಲ. ಕಡೆಗೆ ಯಾರೋ ಹೇಳಿದರಂತೆ-ಒಂದು ಜೊತೆ ತಿಗಣೆಗಳನ್ನು, ಮಗಳನ್ನು ಅಳಿಯನ ಜೊತೆಯಲ್ಲಿ ಅತ್ತೇ ಮನೆಗೆ ಕಳುಹಿಸುವ ಹಾಗೆ ಬೇರೊಬ್ಬರ ಮನೆಯಲ್ಲಿ ಬಿಟ್ಟು ಬಂದರೆ—ಅವು ತಮ್ಮ ಇಡೀ ಪರಿವಾರವನ್ನೆಲ್ಲಾ ಕರೆದುಕೊಂಡು ಆ ಹೊಸಮನೆಗೇ ಹೋಗುತ್ತವೆ—ಅಂತ ಆಗ ಅದೃಷ್ಟಕ್ಕೆ ಸರಿಯಾಗಿ ಚಂದೀ ಮನೆಯಲ್ಲಿ ತಿಗಣೆ ಕಾಟವಿರಲಿಲ್ಲ. ನಾನೂ ರಾಜ ಸೇರಿ, ಮೇಲೆ ಹೇಳಿದ ರೀತಿಯಲ್ಲಿ ಎರಡು ತಿಗಣೆಗಳನ್ನು ಹುಷಾರಾಗಿ ಹಿಡಿದು, ಅರುಶಿನ ಕುಂಕುಮ, ಅಕ್ಕಿ, ಬೆಲ್ಲ, ಉಪ್ಪು, ಇವುಗಳ ಜೊತೆಗೆ ಚಂದೀ ಮನೆಯಲ್ಲಿ ಗುಟ್ಟಾಗಿ ಬಿಟ್ಟು ಬಂದೆವು. ಒಂದುವಾರವಾಯ್ತು, ಎರಡಾಯ್ತು-ತಿಂಗಳಾಯ್ತು—ಚಂದಿ ಯಥಾಪ್ರಕಾರ ಕುಂಭಕರ್ಣನ ಹಾಗೆ ನಿದ್ದೆಮಾಡಿ ನಗು ನಗುತ್ತಾ ಎದ್ದು ಬರುತ್ತಿದ್ದ! ರಾಜನಿಗೆ ಇದನ್ನು ನೋಡಿ ಬೇಸರವಾಯ್ತು. ಪುನಹ ಅವನು ತಿಗಣೆ ತಂಟೆಗೆ ಹೋಗಲಿಲ್ಲ. ಬದಲಾಗಿ ಅವುಗಳ ಜೊತೆಗೆ ಸ್ನೇಹಮಾಡಿಕೊಂಡುಬಿಟ್ಟ. ಈಗಲೂ ಹೇಳುತ್ತಾನೆ—ಅವನ ಮನೆಯಲ್ಲಿ ತಿಗಣೆ ಇರೋವರಿವಿಗೂ ತನಗೆ ರಕ್ತದ ವತ್ತಡ ಅಂದರೆ Blood pressure ಬರೋ ತಂಟೆಯೇ ಇಲ್ಲ ಅಂತ! ನನಗೀಗ ಅನ್ನಿಸುತ್ತೇ-ಪ್ರಾಯಶಃ ನಾನೂ ರಾಜ, ಅವಸರದಲ್ಲಿ ಚಂದೀ ಮನೆಯಲ್ಲಿ ಎರಡೂ ಗಂಡು ತಿಗಣೆಗಳನ್ನೇ ಬಿಟ್ಟು ಬಂದಿರಬಹುದೇ ಅಂತ!

ಬೆಳಗಾಗುತ್ತಲೇ ಬೈಲೂರು ಬಿಟ್ಟೆವು. ಬಿಟ್ಟ ಕಾಲುಘಂಟೆಗೆ ಮಳೆಶುರುವಾಯ್ತು. ನಾವೂ ಮರದಡಿಯಲ್ಲೇ ಹುಷಾರಾಗಿ ನೆನೆಯುತ್ತಾ, ವಾಹನಗಳನ್ನು ನಿಧಾನವಾಗಿ ತುಳಿಯುತ್ತ ತುಂತರಕಟ್ಟೆಗೆ ಬಂದು ಸೇರಿದೆವು. ಮೂವರೂ ಊರ ಮುಂದಿನ ಒಂದು ಮಂಟಪದಲ್ಲಿ ಸೇರಿಕೊಂಡೆವು. ನಾವಲ್ಲಿ ಸೇರುವ ಹೊತ್ತಿಗೆ ಆ ಮಂಟಪದಲ್ಲಿ ಆಗಲೇ ಒಂದು ಐನೂರು ಜನ, ಒಂದು ಸಾವಿರ ಜಾನುವಾರು ಜಮಾಯಿಸಿದ್ದ ಹಾಗಿತ್ತು. ನಾವೂ ಹಾಗೂ ಹೀಗೂ ನುಗ್ಗಿ, ಬಗ್ಗಿ, ತಗ್ಗಿ, ಕುಗ್ಗಿ,

ಹಿಗ್ಗಿ—ಒಳಕ್ಕೆ ಹೊಕ್ಕೆವು. ಮಂಟಪದ ಅಳತೆ ಸುಮಾರು ೧೨ ಅಡಿ ಉದ್ದ—ಅಷ್ಟೇ ಅಗಲ. ಅಲ್ಲಿ ಅಷ್ಟು ನೂಕು ನುಗ್ಗಲು! ಸ್ವಲ್ಪ ಉಸಿರಾಡೋಕೆ ಸಮಯಸಿಗುತ್ತಲೂ ಜನ, ಜಾನುವಾರನ್ನು ಎಣಿಕೆ ಮಾಡಿದೆ. 6 ಗಂಡಸರು, 5 ಹೆಂಗಸರು, 12 ಹುಡುಗರು, 1 ಕೈಕೂಸು, 4 ಎಮ್ಮೆಗಳು, 1 ಹಸು, 3 ಮೇಕೆಗಳು 5 ಕತ್ತೆಗಳು—ನಾವು ಮೂವರು ಬಿಟ್ಟು ಇಷ್ಟು ಪ್ರಾಣಿಗಳಿದ್ದೆವು. ಚಂದಿ ಮೆಹನತ್ತು ಮಾಡಿ 4 ಎಮ್ಮೆ, 1 ಹಸು, 3 ಮೇಕೆ, 5 ಕತ್ತೆಗಳನ್ನು ಮಂಟಪದಿಂದ ಹೊರಗೆ ಅಟ್ಟಿದ ಅವುಗಳ ಜೊತೆಗೆ ಆ 12 ಹುಡುಗರನ್ನ ಮತ್ತು 1 ಕೈಕೂಸನ್ನು ಓಡಿಸುವುದರಲ್ಲಿದ್ದ—ಅಷ್ಟರಲ್ಲಿ ಅವುಗಳ ಮಾಲೀಕರು ಪ್ರತಿಭಟಿಸಿದಮೇಲೆ ಸುಮ್ಮನಾದ

ನಾವು ಸುಮಾರು ಎರಡು ಘಂಟೆಗಳಕಾಲ ಆ ಮಳೆಯಲ್ಲಿ ಸಿಕ್ಕಿ, ಆ ತುಂತರ ಕಟ್ಟಿ ಮಂಟಪದಲ್ಲಿ ಆ ಗುಂಪಿನಲ್ಲಿ ಸಿಕ್ಕಿಹಾಕಿಕೊಂಡು ನರಳಿದ್ದಾಯ್ತು. ರಾಜ ಚಂದಿಯೇನೋ ಆಗಲೇ ಅಲ್ಲಿದ್ದವರ ಜೊತೆಯಲ್ಲಿ ಹರಟೆಗೆ ಶುರುಮಾಡಿದ್ದರು. ಮಳೆ ನಿಂತಮೇಲೆ-ಅವರಿಬ್ಬರನ್ನೂ ಎಚ್ಚರಿಸಿ ಮೂವರೂ ನಮ್ಮದಾರಿ ಹಿಡಿದೆವು

"ಅಪ್ಪಣ್ಣನ ಅವಸ್ಥೆ-ನಿಜವಾಗಿ–ಪಾಪ!–" ಅಂದ ಚಂದಿ.

"ಅಣ್ಣಪ್ಪನಿಗಿಂತ ತಿಮ್ಮಪ್ಪನದು - ನಿಜವಾಗಿ–ಪಾಪ! ಅಂದ–ರಾಜ.

ಇಬ್ಬರೂ ನನ್ನ ಅಭಿಪ್ರಾಯ ಕೇಳಿದರು.

"ನನಗೆ ಅಣ್ಣಪ್ಪನೂ ಗೊತ್ತಿಲ್ಲ–ತಿಮ್ಮಪ್ಪನೂ ಗೊತ್ತಿಲ್ಲ" ಎಂದೆ.

ನನಗೆ ಅಣ್ಣಪ್ಪನೂ ಗೊತ್ತಿರಲಿಲ್ಲ, ತಿಮ್ಮಪ್ಪನೂ ಗೊತ್ತಿರಲಿಲ್ಲ

ಚಂದಿ ವಿಷಯವೆಲ್ಲಾ ಹೇಳಿದ ಅಣ್ಣಪ್ಪ ತಿಮ್ಮಪ್ಪ ಮೊದಲಾಗಿ ನಮ್ಮ ಜೊತೆಯಲ್ಲಿ ನೆನೆಯುತ್ತ ತುಂತರಕಟ್ಟಿ ಮಂಟಪದಲ್ಲಿ ನಿಂತಿದ್ದ ಎಲ್ಲರೂ ಒಂದೇ ಸಂಸಾರದವರಂತೆ ಎಲ್ಲರೂ ಅಲ್ಲೇ ಒಂದು ದೇವಸ್ಥಾನದ ಜಮೀನನ್ನು ಸಾಗುವಳಿಮಾಡುತ್ತ ಒಕ್ಕಲಾಗಿದ್ದವರು–ವಂಶಪಾರಂಪರ್ಯವಾಗಿ. ಮೊನ್ನೆ ಆ ದೇವಸ್ಥಾನದ ಆಡಳಿತ ಬದಲಾಯಿತು. ಹೊಸ ಆಡಳಿತ ಹೊತ್ತವರು ತಮ್ಮ ಸೇವೆ ದೇವರಿಗೆ ಮತ್ತೂ ಹೆಚ್ಚಾಗಿ ಸಲ್ಲಲಿ ಎಂಬ ಆಸೆಯಿಂದ ಬಹಳ ದಿನದಿಂದ ಇದ್ದ ಈ ಒಕ್ಕಲನ್ನು ಹಠಾತ್ತಾಗಿ ಬಿಡಿಸಿ ಆ ಜಮೀನನ್ನು ತಾವೇ ವಹಿಸಿಕೊಂಡರು. ಈಗ ಒಕ್ಕಲಿನ 6 ಗಂಡಸರು, 5 ಹೆಂಗಸರು, 12 ಹುಡುಗರು, 1 ಕೈಕೂಸು ಬೇರೆ ಕೆಲಸ ಹುಡುಕುತ್ತ ಹೊರಟಿದ್ದಾರೆ. ಸದ್ಯಕ್ಕೆ ಅವರಿಗೆ ಹಾದಿ ಹಾದಿಯಲ್ಲಿ ಸಿಗುವ ಮಂಟಪಗಳೇ ಅವರಿಗೆ ಮನೆ.

ನನಗೆ ಈ ಜಮೀನು, ವಕ್ಕಲುತನ ಇವುಗಳ ವಿಷಯ ಗೊತ್ತಿಲ್ಲ ತಲ ತಲಾಂತರದಿಂದ ನಮ್ಮ ವಂಶಸ್ತರು N. G. O. ಗಳಾಗಿ ಬಲಿತು ಬಂದದ್ದು ಹಾಗಾಗಿ ಈ ಭೂಮಿ, ವ್ಯವಸಾಯ ವಿಷಯಗಳು ಸುತರಾಂ ತಿಳಿಯದು. ಆದರೂ ಇವಕ್ಕೆಲ್ಲಾ ಕಾನೂನು ಗಳಿವೆಯಂತೆ ಆದರೆ ಮೊದಲೇ ಒಕ್ಕಲುಗಳೆಂದರೆ ಬಿಕಾರಿಗಳು. ಇನ್ನು ಅವರು ವಕ್ಕಲುತನವನ್ನು ಕಳೆದುಕೊಂಡಮೇಲೆ, ತಮ್ಮ ಶಿಫಾರಿಸಿಗಾಗಿ ಯಾವ ಲಾಯರಿಯನ್ನು ಹಿಡಿದಾರು? ಇವರಂತಹವರನ್ನು ಆಶ್ರಯಿಸುವ ಲಾಯರುಗಳ ಹೊಟ್ಟೆಪಾಡೇನು?—

ಈ ಸಮಸ್ಯೆಯನ್ನೇ ಯೋಚಿಸುತ್ತಾ ತಲಕಾಡಿನ ದಾರಿ ಹಿಡಿದೆವು.

— "ಕೇಫ"

---




ಬ್ರಾಲಿಕ್ ಕುಡಿಯುಕ್ಕೆ ಶುರುಮಾಡಿದಮೇಲೆ ನೋಡಿ, ಹೊಟ್ಟೆ ಹುಳುಗಳು ರಟ್ಟೆಗಾತ್ರ ಆಗಿವೆ–ಮಕ್ಕಳೇನೋ ಕುಚೇಲನಂತೇ ಇವೆ! ಸ್ವಾಮಿ!

# ಹೆಣ್ಣು ನೋಡುವುದು

ಇದು ವೈಜ್ಞಾನಿಕ ಯುಗ. ಆದ್ದರಿಂದ, ಹೆಣ್ಣು ನೋಡಿ, ಒಪ್ಪುವುದೇ ಸರಿ. ಆಕೆಯ ಹಾಡುಗಾರಿಕೆ, ಅಡಿಗೆ ಸಾಮರ್ಥ್ಯ, ಆಕಾರ, ಧ್ವನಿ, ನಡೆ, ನುಡಿ, ಎಲ್ಲವನ್ನೂ ಪರೀಕ್ಷಿಸುವುದು ಒಳ್ಳೆಯದು. ಹಾಗೆಯೇ, ಆಕೆಯೊಂದಿಗೆ ಸಂಸಾರ ಮಾಡುವಾಗ, ಜೀವನ ಸುಖಮಯವಾಗಿರುತ್ತದೋ ಎಂದು ತಿಳಿಯಲು ಕೆಳಗೆ ಕೊಟ್ಟಿರುವ ಪ್ರಶ್ನಾವಳಿಯನ್ನು ಆಕೆಯಿಂದ ಉತ್ತರಿಸಿ, ಆ ಉತ್ತರಗಳಿಂದ ಆಕೆಯ ಗುಣಗಳನ್ನು ತಿಳಿಯುವುದೂ ಅತ್ಯವಶ್ಯಕ ಕನ್ನಡಿಗ ತರುಣರಿಗಾಗಿ ಈ ಪ್ರಶ್ನಾವಳಿಯನ್ನು ತಯಾರಿಸಿದೆ

ಇದರಡಿಯಲ್ಲಿ ಕೊಟ್ಟಿರುವ ೨೦ ವಾಕ್ಯಗಳು ನಾಗರಿಕ ಗೃಹಸ್ಥರ ವಾದ ಧರ್ಮಗಳಂತೆ. ಅವುಗಳಲ್ಲಿ ನಿಮಗೆ ಸರಿ ಎಂದು ತೋರಿಬರುವುದನ್ನು ಸರಿ ಎಂದೂ, ತಪ್ಪೆಂದು ಕಂಡದ್ದನ್ನು ತಪ್ಪೆಂದೂ, ಸರಿಯೋ ತಪ್ಪೋ ಗೊತ್ತಿಲ್ಲವಾದರೆ, ಗೊತ್ತಿಲ್ಲ ಎಂದೂ ಗುರುತಿಸಿರಿ : —

೧. ಹಾಡುವುದನ್ನು ಕಲಿತಿರುವ ಹುಡುಗಿಯರೆಲ್ಲ ರೇಡಿಯೋದಲ್ಲಿ ಹಾಡಬಹುದು.

೨. ಅತ್ತೆಮಾವಂದಿರು ಮನೆಗೆ ಬಂದರೆ, ಅವರಿಗೆ ನಮುಸ್ಕಾರಮಾಡಬೇಕು

೩. ನಾಟಕದಲ್ಲಿ ಹೆಣ್ಣು ಪಾರ್ಟುಗಳನ್ನು ಮಾಡಲು ಹೆಣ್ಣುಮಕ್ಕಳೇ ಬೇಕಾಗಿರುವುದರಿಂದ, ಆಕ್ಟಿಂಗ್ ಬರುವ ಹೆಣ್ಣುಮಕ್ಕಳು ಪಾರ್ಟು ಮಾಡಲೇಬೇಕು, ಕಲಾದೃಷ್ಟಿಯಿಂದ.

೪. ಜೊತೆಯಲ್ಲೋದುವ ಗಂಡುಹುಡುಗರ ನೋಟ್ಸನ್ನು ಎರವಲು ಪಡೆದು ಓದಬಹುದು

೫. ನಡೆಯುವುದಕ್ಕಿಂತ ಸೈಕಲ್ಲಲ್ಲಿ ಹೋಗುವುದೇ ಮೇಲು

೬. ಬಾವಿಯಿಂದ ನೀರು ಸೇದುವುದು ಅನಾಗರಿಕ ಸಂಪ್ರದಾಯ.

೭. ಕೆನ್ನೆ ತುಂಬ ಅರಿಶಿನ ಇದ್ದೇ ಇರಬೇಕು.

೮. ವಾಕಿಂಗ್ ಹೋಗುವಾಗ, ಗಂಡನ **ಹಿಂದೆ** ಹೆಂಡತಿ ಇರಬೇಕು.

೯. ಗಂಡ ಯಾರಿಗೆ ವೋಟು ಮಾಡುತ್ತಾನೋ ಅವನಿಗೆ ಹೆಂಡತಿಯೂ ತನ್ನ ವೋಟ್ ಕೊಡುವುದೇ ಪಾತಿವ್ರತ್ಯ

೧೦. ಗಂಡನ ಅಪ್ಪಣೆ ಇಲ್ಲದೆ ತವರುಮನೆಗೆ ಕಾಗದ ಬರಿಯಬಾರದು.

೧೧. ಗಂಡ ಅಡಿಗೆಮಾಡಿದರೆ, ಅದನ್ನು ತಿನ್ನಲೇಬೇಕು.

೧೨. ಪಾಶ್ಚಾತ್ಯ ಸಿನಿಮಾಗಳು ತುಂಬಾ ಹೊಲಸು

೧೩ ನೆರೆಹೊರೆ ಮನೆಗಳಲ್ಲಿ ಯಾರೂ ನಮ್ಮಷ್ಟು ಅನ್ಯೋನ್ಯವಾಗಿ ಬಾಳುವುದಿಲ್ಲ

೧೪. ವರದಕ್ಷಿಣೆ, ದಕ್ಷಿಣೆ ಅಲ್ಲ; ಗಂಡಿಗೆ ಹೆಣ್ಣು ಕೊಡಬೇಕಾದ ಬೆಲೆ.

೧೫. ಹೆಂಡತಿಯ ತಮ್ಮಂದಿರ ವಿದ್ಯಾಭ್ಯಾಸದ ಖರ್ಚು ವೆಚ್ಚಾದಿಗಳೆಲ್ಲ ಗಂಡನಿಗೆ ಸೇರಿದ್ದು.

೧೬ ಮದುವೆಮಾಡಿಕೊಂಡ ಗಂಡನಿಗೆ, ಅಲ್ಲಿಂದಾಚೆ, ತಮ್ಮನೂ ಇಲ್ಲ, ತಂಗಿಯೂ ಇಲ್ಲ.

೧೭. ಮದುವೆಯಾದಮೇಲೆ ಹತ್ತುವರ್ಷಗಳತನಕ ಮಕ್ಕಳಾಗಲೇಬಾರದು.

೧೮. ಗಂಡ ಹೊತ್ತಾಗಿ ಮನೆಗೆ ಬಂದರೆ-ತಂಗಳನ್ನವೂ ಸಿಗದಂತೆ, ಅಡಿಗೆ ಪಾತ್ರೆಗಳನ್ನೆಲ್ಲಾ ಬಚ್ಚಲಿಗೆ ಹಾಕಬೇಕು.

೧೯. ಹಳೇ ಪಾಗಿನಕಂಬಿ ಅಂತ ಕೂಗುತ್ತ ಬರುವವರು ನಮ್ಮ ಸಂಸಾರಕ್ಕೆ ಖಂಡಿತವಾಗಿಯೂ ಕಂಟಕ ಪ್ರಾಯರು.

೨೦. ಹೆತ್ತವರಿಗೆ ಹೆಗ್ಗಣ ಮುದ್ದು, ಕೂಡಿದವರಿಗೆ ಕೊಡಗು ಮುದ್ದು.

ಉತ್ತರಗಳನ್ನು ತಿರುವಿಹಾಕಿ, ಒಟ್ಟು "೧೫ ಸರಿ, ೩ ತಪ್ಪು, ೨ ಗೊತ್ತಿಲ್ಲ ಇದ್ದರೆ, ಹುಡುಗಿ ಫಸ್ಟ್‌ಕ್ಲಾಸ್! ೧೨ ಸರಿ, ೩ ತಪ್ಪು, ೫ ಗೊತ್ತಿಲ್ಲ ಇದ್ದರೆ, ಸೆಕಂಡ್‌ಕ್ಲಾಸ್! ೧೦ ಸರಿ, ೪ ತಪ್ಪು, ೬ ಗೊತ್ತಿಲ್ಲ, ಇದ್ದರೆ, ಪ್ಯಾಸು....ಅದಕ್ಕಿಂತ ಕಡಮೆಯಾದರೆ, ಊರಿಗೆ ಹೋಗಿ ಕಾಗದ ಬರೀತೇನೆ, ಎಂದು ಹೇಳಿ, ಹೊರಟು ಬಿಡಿ. ಸುಮ್ಮನೆ, ಟಪಾಲು ಖರ್ಚಿಗೆ ಕಾಸು ಚೆಲ್ಲಬೇಡಿ.

— ಸಾರಥಿ.

---

# ಬೆಣ್ಣೆ ತಿಂದ ಬೆಕ್ಕು

ನಾಗರಿಕತೆಯ ತುತ್ತ ತುದಿಯನ್ನೇರಿ, ಸುಖ ಸಂಕಥಾವಿನೋದದಿಂ ವಿರಾಜ ಮಾನವಾಗಿರುವ ಅಮೇರಿಕದ ಸಂಯುಕ್ತ ಸಂಸ್ಥಾನದಲ್ಲಿ, ನೆಬ್ರಾಸ್ಕಾ ಎಂಬುದೊಂದು ಸಂಸ್ಥಾನದಲ್ಲಿಯ ಉಪಾಧ್ಯಾಯರುಗಳ ಗುರುತರವಾದ ಚಟುವಟಿಕೆಗಳನ್ನೆಲ್ಲ ವರದಿ ಮಾಡುವ 'ನೆಬ್ರಾಸ್ಕಾ ಎಡುಕೇಷನಲ್ ಜರ್ನಲ್' ಎಂಬ ಮಾಸಪತ್ರಿಕೆಯಲ್ಲಿ, ಕೆಲವು ವರ್ಷಗಳ ಹಿಂದೆ, ಅತ್ಯಂತ ಅಮೂಲ್ಯವಾದ ಒಂದು ಸುದ್ದಿ ಬಂದಿತ್ತು. ಉಪಾಧ್ಯಾಯರುಗಳನ್ನು ಅರಸಿಕರೆಂದೂ, ಸಮಾಜ ಜೀವನದಿಂದ ದೂರಗಾಮಿಗಳೆಂದೂ, ಅಪ್ರಯೋಜಕರೆಂದು ದೂರುವವರೆಲ್ಲರೂ ಆ ಸುದ್ದಿಯನ್ನೋದಿ ಸಂತೃಪ್ತಿ ಪಡೆಯದೆ ಇರಲಾರರು.

"ಉಪಾಧ್ಯಾಯ ಸಂಘದಲ್ಲಿ ಮೊನ್ನೆ ಒಂದು ಸ್ಪರ್ಧೆ ನಡೆಯಿತು. ಕರ್ಬೂಜ್ ಹಣ್ಣನ್ನು ಯಾರು ಹೆಚ್ಚು ತಿನ್ನುತ್ತಾರೆ, ಎಂಬುದೇ ಸ್ಪರ್ಧೆ. ಹಣ್ಣು ತಿನ್ನುವ ಪೈಪೋಟಿಗಾಗಿ ಬಂದವರೆಲ್ಲರನ್ನೂ. ತಿನ್ನುವ ಮೊದಲು, ತಿಂದನಂತರ, ಹೀಗೆ ಎರಡುಸಲ ತೂಕಮಾಡಲಾಯಿತು. ತಮ್ಮ ತೂಕವನ್ನು ಹೆಚ್ಚಾಗಿ ಅಧಿಕರಿಸಿಕೊಂಡವರಿಗೆ ಬಹುಮಾನ ಕೊಡಲಾಯಿತು"

ಇದೇ ಆ ಸುದ್ದಿ .......ನಾವು ಇಂಥ ಸ್ಪರ್ಧೆಗಳನ್ನು ಏರ್ಪಡಿಸಿದರೆ, ಆತ ತಿಂದ ಮಂಡಿಗೆ, ಜಿಲೋಬಿ, ಅಂಬೊಡೆ ಇವುಗಳ ಸಂಖ್ಯೆಯನ್ನೇ ಗಣನೆಗೆ ತೆಗೆದುಕೊಳ್ಳುತ್ತೇವೆ ಆದರೆ, ಹಾಗೆ ಮಾಡಿದರೆ, ಮೋಸಕ್ಕೆಡೆ ಉಂಟು. ಅಂಬೊಡೆಗಳನ್ನು ಪರ್ಟಿನ ಸಂದಿನಿಂದ ಇಳಿಯಬಿಡಬಹುದು; ಜಿಲೋಬಿಗಳನ್ನು ಮಂದಳಿಗೆ ಕೆಳಗಿಟ್ಟು ಮೇಲೆ ಕೂತುಬಿಡಬಹುದು. ಮಂಡಿಗೆಗಳ ತೂಕ ಒಂದಕ್ಕೊಂದು ವ್ಯತ್ಯಾಸವಿರಬಹುದು ಆದರೆ, ಅಮೇರಿಕನ್ನರು ನಮಗಿಂತ ಹೆಚ್ಚು ವಿಜ್ಞಾನಿಗಳು. ತಿನ್ನುವುದು ಮುಖ್ಯವಲ್ಲ, ಹೊಟ್ಟೆಗೆ ಭಾರವಾಗುವುದು ಮುಖ್ಯ, ಮೈಗೆ ಅಂಟಿಕೊಳ್ಳುವುದು ಮುಖ್ಯ, ಎಂದು ಅವರು ಎಣಿಸಿದಾರೆ. ಅದಕ್ಕೇ ಅವರನ್ನು ಜಗತ್ತಿನಲ್ಲಿ ಬುದ್ಧಿವಂತರೆಂದು ಕೊಂಡಾಡುತ್ತಿರುವರು.

ಇದೇ ತತ್ವವನ್ನು ಮೊನ್ನೆ ಶ್ರೀರಾಮ ಪುರದ ನನ್ನ ಗೆಳೆಯನೊಬ್ಬ ಅನುಸರಿಸಿ ಮನೆಯಿಂದ ಬೆಣ್ಣೆಕದ್ದವರು ಯಾರು ಎಂಬುದನ್ನ ಪತ್ತೆ ಹಚ್ಚಿದ, ಜನರನ್ನು ನಿಲ್ಲಿಸಿ ತೂಕ ನೋಡುವ ಒಂದು ಮೆಷೀನನ್ನು ಹರಾಜಿನಲ್ಲಿ ಕೊಂಡುಕೊಂಡ ದಿನವೇ ನಾನು

ಅವನಿಗೆ ಈ ಮೇಷ್ಟ್ರುಗಳ ಮಹಾಸಾಹಸದ ಕಥೆಯನ್ನು ಹೇಳಿದ್ದೆ. ಅರ್ಧಸೇರು ಬೆಣ್ಣೆ ಮಾಯವಾದ ಮೂರೇ ಮೂರು ವಾರದಲ್ಲಿ ಅದನ್ನು ಕದ್ದ ಆಸಾಮಿ ಮನೆ ಬೆಕ್ಕಲ್ಲದೆ ಮತ್ತಾರೂ ಅಲ್ಲವೆಂದು ಅವನು ಪತ್ತೆ ಹಚ್ಚಿದ, ವೈಜ್ಞಾನಿಕ ಪ್ರಯೋಗ ರೀತ್ಯಾ.

ಹತ್ತೂವರೆ ಊಟವಾಗುತ್ತಲೂ, ದಿನವೂ ಅವನು ತನ್ನ ಹೆಂಡತಿ, ನಾಲ್ಕು ಮಕ್ಕಳು ಎಲ್ಲರನ್ನೂ ತೂಕಮಾಡಿ, ನೋಟು ಬುಕ್ಕಲ್ಲಿ ಬರೆದಿಡುತ್ತಿದ್ದ. ಕಳುವಿನ ಸುದ್ದಿ ತಿಳಿಯುತ್ತಲೂ, ಅವನು ಅವರನ್ನೆಲ್ಲ ಮತ್ತೆ ತೂಗಿದ. ಪಾಪ! ಅವರ ತೂಕ ಅರ್ಧರ್ಧ ಸೇರು ಕಡಿಮೆ ಇತ್ತು. ಮನೆ ಬೆಕ್ಕನ್ನೂ ತೂಕ ಮಾಡಿದ ಆದರೆ, ಬೆಣ್ಣೆ ಕಳುವಾಗುವ ಮೊದಲು ಅದು ಎಷ್ಟು ತೂಕ ಇತ್ತು, ಎಂಬುದು ಅವನಿಗೆ ತಿಳಿಯದು. ಅದಕ್ಕಾಗಿ, ಅವನು ಮೂರುವಾರಗಳ ಅನಂತರ, ಬೆಳಗ್ಗೆ ಅದನ್ನು ತೂಕಮಾಡಿದಾಗ, ಬೆಣ್ಣೆ ಹೋದ ದಿನಕ್ಕಿಂತ ಥೇಟ್ ಅರ್ಧ ಸೇರು ಕಡಿಮೆ ಇತ್ತು, ಕಳ್ಳ ಸಿಕ್ಕಿಬಿದ್ದ.

ಅಮೇರಿಕಾಗೆ ಹೋಗಿಬಂದ ಕನ್ನಡಿಗರೊಬ್ಬರು ಮೊನ್ನೆ ಹೇಳುತ್ತಿದ್ದರು: ಅಲ್ಲಿ ಕೆಲವು ಹೋಟೆಲುಗಳಲ್ಲಿ ಈ ತೂಕದ ವ್ಯತ್ಯಾಸದಮೇಲೆ, ಸೇರಿಗಿಷ್ಟು ಎಂಬ ರೇಟಿನಮೇಲೆ, ಬಿಲ್ ಮಾಡುತ್ತಾರಂತೆ. ಬಕಾಸುರರಿಗೂ ಒಂದೇ ರೇಟು, ಕಡ್ಡಿ ಹೊಟ್ಟೆಯವರಿಗೂ ಒಂದೇ ರೇಟು ಎಂಬ ನಮ್ಮ ಪದ್ಧತಿಗಿಂತ ಇದು ಎಷ್ಟೋ ನ್ಯಾಯಸಮ್ಮತವಾಗಿದೆ

ತಲೆಗೆ ತುಂಬುವ ವಿಶ್ವವಿದ್ಯಾಲಯಗಳಿಗೂ ಇದೇ ನೀತಿಯನ್ನು ಅನುಸರಿಸುವಂತೆ ಅಮೇರಿಕಾದ ವಿದ್ಯಾರ್ಥಿ ಸಂಗದವರು ಒತ್ತಾಯಪಡಿಸುತ್ತಿದಾರಂತೆ. ಆ ಪದ್ಧತಿ ಅಲ್ಲಿ ಜಯಪ್ರದವಾದರೆ, ನಾವು ನಮ್ಮ ಕಾಲೇಜ ಗಳನ್ನು ಮುಚ್ಚಬೇಕಾಗಿ ಒರುತ್ತದೆ.

ವಿಜ್ಞಾನ ಯುಗದಲ್ಲಿ ಏನೇನು ಸೋಜಿಗ ಅವಿರ್ಭವಿಸುತ್ತದೋ, ಕಾದು ನೋಡುವುದೇ ನಮ್ಮ ಹಣೆಯಬರಹ!

—ಪಾಟಾಳಿ.

## "ಅಸೆಂಬ್ಲಿ ತೆರೆಯ ಹಿಂದಿನ ಕಾಗದಗಳು"

ಪರಮಪ್ರಿಯ ಇಂಬಣ್ಣ,

ನಾಳೆ ಕರ್ನಾಟಕ ಏಕೀಕರಣದ ಪ್ರಶ್ನೆಯು ಚರ್ಚೆಯಾಗುತ್ತಲ್ಲವೇ? ನಾನೇನೋ ನನಗೆ ಬೇಕಾದ ಅಂಕಿ ಅಂಶಗಳನ್ನು ತೆಗೆದುಕೊಂಡು ನ್ಯಾಯವಾದ ಬೃಹತ್ಕರ್ಣಾಟಕದ ಸ್ಥಾಪನೆಗಾಗಿ ಭಾಷಣ ಮಾಡಬೇಕೆಂದಿದ್ದೇನೆ. ಆದರೆ ಈಗಿನ ಕಾಲದಲ್ಲಿ ನ್ಯಾಯವಾದಕ್ಕೆ ಬೆಲೆ ಏನುಬಂತು? ದೊಡ್ಡಗಂಟಲಿನವನೇ ದೊಡ್ಡಪ್ಪ! ನಗಾರಿ ಹೊಡೆದವನೇ ನಾಯಕ!! ದನಿಗೂಡಿದರೆ ಠರಾವು ಪಾಸಾಗುತ್ತೆ!! ಕಾರಣ ನಿನ್ನ ಅಭಿಪ್ರಾಯ, ನಿನ್ನ ಸಲಹೆ, ನಿನ್ನ ಬುದ್ಧಿವಾದವನ್ನು ಕೇಳಲು ಈ ಸಂಜೆ ಏಳುಗಂಟೆಗೆ ನಿನ್ನ ಕೊಠಡಿಗೆ ಬಂದು ಅರ್ಧಗಂಟೆಕಾಲ ಕಾಣಬಹುದೇ? ಅಥವಾ ಈ ದಿನ ತಂಪುಸಂಜೆಯಲ್ಲಿ ಆ ಹೊತ್ತಿನಲ್ಲಿ ಬೇರೆ ಬೇರೆ ಕಾರ್ಯಕ್ರಮ ಉಂಟೇ? ಹಾಗಿದ್ದರೆ ನಿಮ್ಮನ್ನು ರಾತ್ರಿ ಯಾವ ಹೊತ್ತಿನಲ್ಲಿ ಕಾಣಲಿ?

ಈ ಕಾಗದ ತರುವ ಅಸಿಸ್ಟೆಂಟ್ ಕಮಿಷನರ ಕೈಲೇ ಜವಾಬು ಬರೆದು ಕಳಿಸಿ. ಆತ ಉತ್ತರಕ್ಕಾಗಿ ಕಾದಿರುತ್ತಾನೆ. ಹೀಗೆ ಮಾಡಿಯೇ ಆತ ಹಾಗಾಗಿರುವುದು!! ಏನೂ ಸಂಕೋಚಬೇಡ.

ನಿಮ್ಮ ಸಲಹಾಭಿಲಾಷಿ
ರಡಿಯಯ್ಯ.

* * *

ಸೋದರ ಇಂಬಣ್ಣ,

ಕರ್ಣಾಟಕದ, ಬರೀ ಕರ್ಣಾಟಕ ಏಕೆ? ಬೃಹತ್ಕರ್ಣಾಟಕದ ಹಿರಿಯ ಸುಪುತ್ರನಾದ ನಿನ್ನ ಅಭಿಪ್ರಾಯ, ಸಲಹೆ, ಇಂಗಿತ, ಆಶೀರ್ವಾದ ಇತ್ಯಾದಿಯನ್ನು ಪಡೆದು ನಾಳೆ ನಾನು ಅಸೆಂಬ್ಲಿಯಲ್ಲಿ ನನ್ನ ಅಭಿಪ್ರಾಯವನ್ನು ಅನುಮಾನವಿಲ್ಲದ ರೀತಿ ಘಂಟಾ ಘೋಷವಾಗಿ ಹೇಳಬೇಕೆಂದಿದ್ದೇನೆ. ಕಮಿಟಿಯವರ ವರದಿ ಕಾಂಗ್ರೇಸ್ ಘೋಷಣೆಗಳು, ನಾಯಕರ ಅಂದಂದಿನ ಹೇಳಿಕೆಗಳು, ಎಲ್ಲವನ್ನು ಆಮೂಲಾಗ್ರವಾಗಿ ವ್ಯಾಸಂಗಮಾಡಿದ್ದೇನೆ. ಉತ್ತರ ಹೀಗೂ ಆಗಬಹುದು! ಹಾಗೂ ಆಗಬಹುದು!! ಅಂತಿದೆ. ಆದರೆ ನಾನು ಆಯ್ಕೆಯಾದ ಪ್ರಾಂತ್ಯದಲ್ಲಿ ಬಹು ಜನರಿಗೆ ತುಳು ಮಾತನಾಡುವವರ ಮೇಲೆ ಮೋಹ, ಅದಕ್ಕೆ ಪ್ರಕೃತಿಯು ಸಾಕಷ್ಟು ಕಾರಣಗಳನ್ನು ಕೊಟ್ಟಿದೆ. ಕಣ್ಣಿದ್ದವರಿಗೆ ರೂಪಾರಾಧಕರಿಗೆ ಅದು ಸ್ವತಃ

ವೇದ್ಯ! ಅವರೆಲ್ಲರೂ ಹಣಗಳಿಸಿಬೇಕಾದರೆ, ಜೋರು ಬಾಳು ನಡೆಸಬೇಕಾದರೆ ಬೃಹತ್ಕರ್ಣಾಟಕ ಅವಶ್ಯಕ. ಹಾಗಾಗಿ ಆ ಪಲ್ಲವಿಯನ್ನೇ ನಾನು ಹಾಡಬೇಕು ಇಲ್ಲದಿದ್ದರೆ ಮುಂದಿನ ಚುನಾವಣೆಗಳಲ್ಲಿ ನಾನೂ ಊರಾಚೆ ಗುಡಿಸಲು ಕಟ್ಟಿಕೊಳ್ಳ ಬೇಕಾಗುತ್ತೆ?

ಆವರೆ ಈಗ ಹಾಗೆ ಮಾತನಾಡಿದರೆ ಈಗಿರುವ ಲೈಸೆನ್ಸುಗಳು ಕಾರಣಾಂತರ ದಿಂದ ಕೂಡಲೇ ಬಂದಾಗಬಹುದು. ಮುಂದಿನ ಚುನಾವಣೆಗಳತನಕ ಬದುಕುವುದೇ ಕಷ್ಟವಾಗಬಹುದು.

ಇಂತಹ ಅಘೋರವಾದ ಸಮಸ್ಯೆಯನ್ನು ನಾನು ನಾಲ್ಕು ಮದುವೆಗಳು ಮಾಡಿಕೊಂಡಾಗಲೂ ಎದುರಿಸಬೇಕಾಗಲಿಲ್ಲ ಆದಕ್ಕಾಗಿಯೇ ನಿಮ್ಮ ಸಲಹೆ, ಅಭಿಪ್ರಾಯಪಡೆಯಲು ಈ ಸಂಜೆ ಏಳುಗಂಟೆಗೆ ನಿಮ್ಮ ಕೊಠಡಿಯಲ್ಲಿ ಭೇಟಿ ಮಾಡಲು ಕಾತುರನಾಗಿದ್ದೇನೆ. ಈ ಚೀಟಿ ತರುವ ಅಮಲ್ದಾರನ ಕೈಲಿ ಜವಾಬು ಹೇಳಿಕಳಿಸಿ. ಅಮಲ್ದಾರನಿಗೆ ಅಂಚೆ ಕೆಲಸವೇ ಎಂದು ಯೋಚಿಸಬೇಡಿ ಆತ ಅಮಲ್ದಾರನಾದದ್ದು ನನ್ನಿಂದಲೇ! ನಾನು ಮುಂದಕ್ಕೆ ಆಯ್ಕೆಯಾದರೆ ಆತ ಅಸಿಸ್ಟೆಂಟ್ ಕಮಿಷನರ್ ಆಗೋದು! ಕಾರಣ ಇದು ಅವನ ಶ್ರೇಯೋಭಿವೃದ್ಧಿಯ ಕೆಲಸ! ಏನೂ ಸಂಕೋಚವಿಲ್ಲದೆ ಅವನ ಕೈಲಿ ನಿಮಗೆ ಬಿಡುವಾದಾಗ ಜವಾಬು ಬರೆದು-ವಾ-ಹೇಳಿ ಕಳಿಸಿಕೊಡಿ.

ನಿಮ್ಮ ಆಶೀರ್ವಾದಾಕಾಂಕ್ಷಿ,
ಸಿದ್ದಾಪ್ಪೆ

* * *

ಇಂಬಣ್ಣಾ,

ನೀನೂ ನಾನೂ ಕಾವೇರೀ ದಡದಲ್ಲಿ ಮರಳುಗುಪ್ಪೆ ಆಡಿದ್ದು ಜ್ಞಾಪಕ ಇದೆಯೇ? ಚಿನ್ನಿಕೋಲು ಆಡುವಾಗ ಬ್ಯಾಂಕ್ ಸ್ಕೋರನ್ನೇ ಕದ್ದಿದ್ದು ಜ್ಞಾಪಕ ಇದೆಯೇ? ಹಾಯಸ್ಕೂಲಿನಲ್ಲಿ ನಾವಿಬ್ಬರೂ ಮುಂದೆ ಕೂತಿದ್ದ ಶ್ಯಾಮೈಯ್ಯಂಗಾರಿ ಪೇಪರನ್ನು ಕಾಪಿ ಹೊಡೆದು ಪ್ಯಾಸುಮಾಡಿದ್ದು ಜ್ಞಾಪಕ ಇದೆಯೇ! ಕಡೆಗೆ ಕಾಲೇಜಿನಲ್ಲಿ ಪ್ರೊಫೆಸರು ನಮ್ಮ ಅಜ್ಞಾನವನ್ನು ಕಂಡು, ಇಂತಹವರು ದೇಶಕ್ಕೆ ದ್ರೋಹಮಾಡುವಷ್ಟು ಎಂದಿಗೂ ಆಗಲಾರರು ಎಂದು ಪ್ಯಾಸುಮಾಡಿಸಿ, ಹಾಗೇ ಎಲ್ಲರೆದುರಿಗೂ ಹೇಳಿದ್ದು ಜ್ಞಾಪಕ ಇದೆಯೇ?

ಇದೆಲ್ಲಾ ಈ ದಿನ ಅಸೆಂಬ್ಲಿಯಲ್ಲಿ ನಿನ್ನನ್ನು ನೋಡಿದಾಗ ನನಗೆ ಜ್ಞಾಪಕ ಬಂತು ನೀನು ತಾಯ್ನಾಡಿನ ಪ್ರೇಮಪುತ್ರ ನಿನ್ನ ಬೆಂಬಲವಿಲ್ಲದೆ ದೇಶದ ಪ್ರಗತಿ ಅಸಾಧ್ಯ!

ನಾಳೆ ನಾನು ಬೃಹತ್ಕರ್ನಾಟಕದಮೇಲೆ ನನ್ನ ಅಭಿಪ್ರಾಯವನ್ನು ಸೂಚಿಸ ಬೇಕೆಂದಿದ್ದೇನೆ. ಬೃಹತ್ಕರ್ಣಾಟಕ ಆದ ದಿನ ಮೈಸೂರು ಮುಡಿದಂತೆಯೇ! ಭಾರತ ಮಾತೆಯ ಕೌಸ್ತುಭದಂತಿರುವ ಈ ಪ್ರಸ್ಥಭೂಮಿಯು ತನ್ನ ವೈಶಿಷ್ಟ್ಯವನ್ನು ಕಳೆದು ಕೊಂಡು ನವಾಬನ ಅರಮನೆಯ ಆರನೂರನೇ ರಾಣಿಯಂತೆ ಆಗಸನೊಡನೆ ಸುಖ ಕಾಣಬೇಕಾದೀತು!! ಅಂದಮೇಲೆ ನಮ್ಮೆಲ್ಲರ ಪಾಡೂ ಗುಂಪಿನಲ್ಲಿ ಗೋವಿಂದ ಅಂದಂತೆಯೇ!!

ನಾವು ಉಳಿದು ಬಾಳಬೇಕಾದರೆ, ನಮ್ಮ ಪಾಡಿಗೆ ನಾವು ಸ್ವತಂತ್ರರಾಗಿರ ಬೇಕು. ಕಮಿಟಿಯವರ ವರದಿಯಿಂದ, ಪ್ರಜಾನಾಯಕರ ಘೋಷಣೆಗಳಿಂದ, ಮಾಸ್ಕೋವಿನ ಉದಾಹರಣೆಗಳಿಂದ ನನ್ನ ವಾದವನ್ನು ಸಮರ್ಥಿಸುತ್ತೇನೆ ಆದರೆ ನಿನ್ನ ಬೆಂಬಲ ಬೇಕೇ ಬೇಕು. ಕಾರಣ ಈ ಸಂಜೆ ಏಳುಗಂಟೆಗೆ ನಿನ್ನನ್ನು ನಿನ್ನ ಕೊಠಡಿಯಲ್ಲಿ ಸಂದರ್ಶಿಸಬಯಸುತ್ತೇನೆ. ಈ ಚೀಟಿ ತರುವವನ ಕೈಲಿ ನಿನ್ನ ಜವಾ ಬನ್ನು ಹೇಳಿಕಳಿಸು. ಆತನ ಬಟ್ಟೆ ಬರೆಯನ್ನು ನೋಡಿ ಡಂಗಾಗಬೇಡ. ಆತ ವಿಲಾಯಿತಿಗೆ ಹೋಗಿ ಬಂದವನೇನೋ ಹೌದು. ಆದರೆ ನಾನು ಕೈಹಾಕದೇ ಇದ್ದರೆ ಆತನಿಗೆ ಕೆಲಸ ಸಿಗುವಂತೆ ಇಲ್ಲ. ಆದುದರಿಂದ ನಮ್ಮಿಬ್ಬರಿಗೂ ಆತ ಅಚ್ಚನ್ನ ಭಕ್ತ. ಸಂಕೋಚವಿಲ್ಲದೆ ಆತನ ಕೈಲಿ ಬೀಡಿ ಬೇಕಾದರೂ ತರಿಸಿಕೊಳ್ಳ ಬಹುದು ನೀನು! ನಿನ್ನ ಎ. ವಿ. ಸ್ಕೂಲಿನ ಬಾಯಿಚಪಲ ನಾನಿನ್ನೂ ಮರೆತಿಲ್ಲ!!

ನಿನ್ನ ಹಳೇ ಸ್ನೇಹಿತ,
ಧೀರಣ್ಣ.

* * *

**ಶ್ರೀಯುತ ಇಂಬಣ್ಣನವರಲ್ಲಿ,**

ಸೇವಕ ಅಲಂಕಾರಯ್ಯನು ಮಾಡುವ ಅನಂತ ಶರಣಾರ್ತಿಗಳು. ನೀವೆಲ್ಲರೂ ಸುಖವಾಗಿದ್ದೀರೆಂದು, ನಿಮ್ಮ ಮೊಗುವನ್ನು ನಿನ್ನೆ ಅಸೆಂಬ್ಲಿಯಲ್ಲಿ ನೋಡಿದಾಗಲೇ ತಿಳಿಯಿತು. ನಿಮ್ಮೂರಿನಲ್ಲಿ ಆಲಿಕಲ್ಲು ಮಳೆಯಾದುದೂ ಇತರ ಪ್ರಾಂತ್ಯಗಳಲ್ಲಿ ಬಿಸಿಲು ಕಾಯುತ್ತಿರುವುದನ್ನು ನೋಡಿದರೇ ತಿಳಿಯುತ್ತೆ ನೀವು ಸತ್ಯವಂತರು, ಋಷ್ಯ ಶೃಂಗನ ಗೋತ್ರದವರು, ಅಂಬೋದು. ದೇವರು ನಿಮ್ಮನ್ನು ಅದೇರೀತಿ ಮಡಗಲಿ ಅಂತಲೇ ನನ್ನ ಹಾರೈಕೆ

ಸದ್ಯಕ್ಕೆ ನಾಳೆ ಒಕ್ಕರ್ಣಾಟಕದ ವಿಚಾರ ನಾನು ಭಾಷಣ ಮಾಡಬೇಕು. ನಮ್ಮ ಮನೆಯವರೆಲ್ಲಾ ಹುಷಾರಿ ಮಡಗ್ತಾ ಅವ್ರೆ ನನಗೆ. "ನೀನೇನಾದರೂ ಹ್ಞೂ ಅಂದ್ಯೋ! ನಿನ್ನ ಶೇವಣಾತಿ ಹಾಳಾಗುತ್ತೆ ಮುಂದಿನ ಇಲೆಕ್ಷನ್ನಲ್ಲಿ" ಅಂತ. ಹ್ಞೂ ಅಂದೇ ಇದ್ರೆ ನಮ್ಮ ಅಳಿಯಂದಿರಾಗೋರಿಗೆ ಪ್ರೊಬೇಷನರಿ ಚಾಕರಿ ಸಿಗೋ ಹಂಗೇ ಇಲ್ಲ. ಹಿಂಗಾಗಿ ಕುಂತ್ಕೈತೆ ನನ್ನ ಮನಸ್ಸು. ಇವತ್ತು ಮಗಳ ಮುಖ ನೋಡ್ಲಾ!– ಬಿಡ್ತಿ! ಎರಡುವರ್ಷ ಆದಮೇಲೆ ಕನ್ನಡೀಲಿ ನನ್ನ ಮುಖ ನೋಡ್ಲಾ!!

ಅದಕ್ಕೇ ಹೊತ್ತು ಮುಳುಗಿದ ಏಳುಗಂಟೆಗೆ ನಿಮ್ಮ ರೂಮಿನಲ್ಲೇ ನೋಡಲು ಬರುತ್ತೇನೆ. ನೀವು ಅಂದಂಗೆ ನಾಳೆ ನಾನೂ ಅನ್ನುತ್ತೇನೆ ಇದು ನಿಮ್ಮಮೇಲೆ ಬಿದ್ದಭಾರ ಅಂತ ತಿಳ್ಕೊಂಡು ನೀವು ಹೇಳಿ ಈ ಕಾಗದ ತರುವಾಕೆಯ ಕೈಲೇ ಜವಾಬು ಕಳಿಸಿ. ಆಕೆಯೇ ನನ್ನ ಹದಿನೂರು ಹೈಕಳನ್ನು ಹೆರಿಸಿದ ಮಿಡ್‌ವೈಫ್

ನಿಮ್ಮವ,
ಅಲಂಕಾರಯ್ಯ

* * *

ಇಂಬಣ್ಣನು ಆರಾಮು ಕುರ್ಚಿಯಲ್ಲಿ ಏಳುಗಂಟೆಗೆ ಸಿಗರೇಟು ಸೇದುತ್ತಿದ್ದಾಗ ಶ್ರೀಯುತ ಬೆಡಿಯುಯ್ಯ. ಎಂ ಎಲ್. ಎ, ಶ್ರೀಯುತ ಸಿದ್ದಾಪ್ಪೈ; ಎಂ. ಎಲ್. ಎ, ಶ್ರೀ ಧೀರಣ್ಣ. ಎಂ ಎಲ್ ಎ; ಶ್ರೀಮಾನ್ ಅಲಂಕಾರಯ್ಯ. ಎಂ ಎಲ್. ಎ; ಎಲ್ಲರೂ ಒಬ್ಬರ ಮುಖ ನೋಡುತ್ತಾ ಒಬ್ಬೊಬ್ಬರಾಗಿ ಬಂದು ಸೇರಿದರು

ಇವರೆಲ್ಲರಿಗೂ ಬೇಕಾದವನು ಇಂಬಣ್ಣ. ಈ ದಿನಗಳಲ್ಲಿ, ಈಕಡೆ ವಾಲಿದರೆ ಇಂಬಣ್ಣ, ಅಲ್ಲೇ ಜಯ! ಆಕಡೆ ಇಂಬಣ್ಣ ತಿರುಗಿದರೆ ಆ ಕಡೆಗೇ ಜಯ!! ಹೀಗಾಗಿ ಇಷ್ಟುದಿನವೂ ನೀನು ಯಾವೂರ ದಾಸಯ್ಯ! ಎಂದು ಕೇಳದೆ ಇದ್ದವರೂ ಕೂಡ ಇಂಬಣ್ಣನ ಸಲಹೆ–ವಾ–ಬೆಂಬಲಕ್ಕೆ ಬಲೆ ಬೀಸಿದ್ದಾರೆ. ಇಂಬಣ್ಣನಿಗೂ ಗೊತ್ತು ಈ ಮರ್ಮ! ಅದಕ್ಕೇ ಅವ ಆರಾಮು ಕುರ್ಚಿಯಲ್ಲಿ ಕೂತು ಹೈರಾವಣ ಮೈರಾವಣ ರನ್ನು ಬೆಂಚಿನಮೇಲೆ ಕೂರಿಸಿದ್ದಾನೆ.

"ವರದಿಗಾರ"

---

## ಹಾದಿಯಲ್ಲಿ ಕೇಳಿಸಿದುದು

"ಏನ್ರೀ–ಈಗ ಈ ಕಾಲೇಜುಗಳಲ್ಲಿ ಆಗುತ್ತಿರೋ ಗಲಾಟೆಗಳಿಗೂ, ಆಗಾಗ ಅಲ್ಲಲ್ಲಿ ನಮ್ಮ ನಾಯಕರು ಸಾರುತ್ತಿರೋ ಅಂತರ್ಜಾತೀಯ ವಿವಾಹ ಪ್ರಶ್ನೆಗೂ, ಈ ಕಾಲೇಜುಗಳಲ್ಲಿ ಸೀಟು ಹಂಚುವುದರಲ್ಲಿ ಅನುಸರಿಸುತ್ತಿರೋ ನೀತಿಗೂ–ಏನಾ ದರೂ ಸಂಬಂಧವಿರಬಹುದೇ !"

"ಕೇಫ"

---

# ಧಾಂಡಿಗರಿಲ್ಲದ ಊರು

ಸುಮ್ಮನೆ ತಿಂದು ತಿಂದು ಅಷ್ಟುದ್ದ ಬೆಳೆದು ಎಂಟು ಮೊಳದ ಪಂಚೆ ಹನ್ನೆರಡು ಮೊಳದ ಸೀರೆ ಉಟ್ಟು ರಟ್ಟೆ ಬೀಸಿದರೇನಾಯಿತು? ಬುದ್ಧಿ ಇಲ್ಲ, ಈ ದೊಡ್ಡವರಿಗೆ... ನನ್ನಂಥ ಸಣ್ಣವರನ್ನ ನಾಲ್ಕು ಮಾತಾಡಿಸುವುದಕ್ಕೇ ಬರದು; ಮರ್ಯಾದೆ ಇಲ್ಲದಿದ್ದರೆ ಹೋಗಲಿ, ವಿವೇಕವಾದರೂ ಬೇಡವೆ?

ನನ್ನೆದುರಿಗೇ ನನ್ನನ್ನ ಜಾಣ, ಅಂತ ಹೊಗಳುತ್ತಾರೆ; ನಾನು ಅದನ್ನು ನಂಬಿ, ಅವರ ದಡ್ಡತನಕ್ಕೆ ಮೆಚ್ಚಿ, ಅವರಿಗೆ ತಂಟೆಮಾಡದೆ, ಸುಮ್ಮನಿರಲಿ, ಅಂತ. ಬಹುಶಃ, ಈ ದೊಡ್ಡವರು ತಮ್ಮನ್ನ ಇಂದ್ರ ಚಂದ್ರ ಮನ್ಮಥ ವಿಶ್ವೇಶ್ವರಯ್ಯ ಎಂದೆಲ್ಲ ಯಾರಾದರೂ ನಾಚಿಕೆಕೆಟ್ಟು ಹೊಗಳಿದರೆ, ತೆಪ್ಪಗೆ, ಹಲ್ಲುಕಿರಿಯುತ್ತಾರೋ ಏನೊ? ಆದರೆ, ನಾವು, ಹುಡುಗರು, ನೆನಪಿರಲಿ ...ಮೊನ್ನೆ, ನಮ್ಮ ಸ್ಕೂಲಿಗೆ ಬಂದಿದ್ದ ಬಿಳಿಟೋಪಿಯವರು ಹೇಳಿದಹಾಗೆ, ನಾವೇ ನಾಳಿನ ನೆಹರೂಗಳು.

ನಾನು ಯಾವಾಗಲಾದರೂ, ಬಿದ್ದು ಮಂಡಿ ತುರಿಸಿಕೊಂಡಾಗ, ಅಯ್ಯೋ ಅಯ್ಯೋ, 'ಹೇಗಾಯಿತೊ?' 'ಎಲ್ಲಿ ಬಿದ್ದೆಯೋ?' 'ಹೇಗೆ ಬಿದ್ದೆಯೊ?' 'ತೋರಿಸು ತಾತನಿಗೆ', 'ತೋರಿಸು ಮಾಮನಿಗೆ?", ಎಂದು ರಂಪ ಎಬ್ಬಿಸುವರು. ಬಂದ ಬಂದವರೆದುರಿಗೆಲ್ಲ ನಾನು ಆ ಗಾಯ ತೋರಿಸಬೇಕಂತೆ. ನಡೆಯುವ ಮಕ್ಕಳೆಲ್ಲ ಎಡವೇ ಎಡವುತ್ತಾರೆ. ಅದರಲ್ಲೇನು ಆಶ್ಚರ್ಯ? ನಮ್ಮಪ್ಪನೂ ಮೊನ್ನೆ ಸೈಕಲಿಂದ ಬಿದ್ದ, ನಮ್ಮಣ್ಣ ಮೊನ್ನೆ ಅದೇನೋ ಲಂಚ ಅಂತೆ, ಅದನ್ನ ತಿಂದನಂತೆ, ಅಮ್ಮ ಹೇಳುತ್ತಿದ್ದಳು ಆದರೂ, ಅವನು ದೊಡ್ಡವನು ಬೀರು ಮೇಲಿನ ರೇಡಿಯೋ ಗುಂಡಿ ಎಟುಕತ್ತೆ, ಅವನಿಗೆ. ಆದ್ದರಿಂದ, ಅವನನ್ನ ಯಾರೂ, "ಹೇಗೆ ತಿಂದೆಯೋ?" "ತೋರಿಸೋ ಮಾಮನಿಗೆ" ಎಂದು ಪೀಡಿಸುತ್ತಿಲ್ಲವಲ್ಲಾ, ಏಕೆ?

ಆಮೇಲೆ ಕೆಲವರಿದಾರೆ .... ನನ್ನ ಹತ್ತಿರ ಮಾತಾಡಬೇಕಾದರೆ, 'ಅಪ್ಪಚ್ಚಿ' ಅಂತಾರೆ, ತೊದಲುವ ಮಕ್ಕಳಹಾಗೆ. 'ಇಶ್ಶಿ' ಅಂತಾರೆ. ಮೋಟಾರ್ ಕಾರ್ ಎನ್ನುವುದಿಲ್ಲ, ಪೂಂ ಪೂಂ ಅಂತಾರೆ, ಚುಕ್ಕು ಚುಕ್ಕು ಹತ್ತಿ ಹೋಗೋಣವೇನೋ, ಅಂತಾರೆ. ಅವಕ್ಕೆಲ್ಲ ಸರಿಯಾದ ಮಾತು ಬೇರೆ ಇದೆ, ನನಗೆ ಗೊತ್ತು. ನಾಲಗೆ ಹೊರಳುವುದಿಲ್ಲ ಅಂತ ನಾವು ಒದ್ದಾಡುತ್ತಿದ್ದರೆ, ಅದನ್ನೇ ಸರಿ ಅಂತ ಇವರೇಕೆ ಸಾಧಿಸಬೇಕು. ಚಂದಮಾಮ ಅಂತಾರೆ, ಬೂ ಹೋಗೋಣ ಅಂತಾರೆ, ಊ ಬಂದಿದೆ

ಯಲ್ಲೋ ಕೈಯಲ್ಲಿ, ಅಂತಾರೆ. ಚಂದ್ರ, ಅಷ್ಟೆ! ಮಾವು ಗೀವು ಎಲ್ಲಾ ಸುಳ್ಳು! ವಾಕಿಂಗ್ ಹೋಗೋದು, ನಮಗೆ ಗೊತ್ತು. ಹುಣ್ಣಿ, ನಮಗೆ ಗೊತ್ತು. ಹಾಗೆಯೇ ಹೇಳಿಕೊಡೋದು ಬಿಟ್ಟು.... ಈ ತೆರನ ಪುಸಲಾವಣೆ ಏಕೆ, ಅಂತೀನಿ?

"ಲೋ! ನಮ್ಮ ಮನೆಗೆ ಬರ್ತಿಯೇನೊ? ಮಾವಿನಹಣ್ಣು ಕೊಡುತ್ತೇನೆ. ನಮ್ಮ ಮನೆಯಲ್ಲಿ ನಾಯಿ ಇದೆ, ಪಾಪ ಇದೆ, ಅಜ್ಜಿ ಇದಾರೆ, ಗುಲಾಬಿ ಹೂವಿದೆ" ಅಂತಾರೆ. ನನ್ನ ತಂದೆ ತಾಯಿ ಬಿಟ್ಟು ಅವರ ಕೂಡ ನಾನೇಕೆ ಹೋಗಬೇಕು? ಈ ಮನೆಯಲ್ಲಿ ಹುಟ್ಟಿಸಿದ ದೇವರು ಇಲ್ಲೇ ಹುಲ್ಲು ಮೇಯಿಸಲಿ....ಸ್ವಾಮಿ! ಅಷ್ಟು ವಿವೇಕ ನಮಗಿದೆ, ತಮಗಿಲ್ಲದಿದ್ದರೂ ನಿಮ್ಮ ಮನೆ ಪಾಪನನ್ನು ನಿಮ್ಮ ಶಕ್ತಿ ಇದ್ದಷ್ಟು, ನಾಯಿ, ಅಜ್ಜಿ, ಗುಲಾಬಿ ಕೊಟ್ಟು, ನೀವು ಕಾಪಾಡಿ, ಸಾಕು ನನ್ನ ತಂಟೆಗೆ ಬರಬೇಡಿ—ಎಂದು ನಾನು ಹೇಳಬಹುದು. ಆದರೆ, ಮಕ್ಕಳಾದರೂ, ನಮಗೆ ಕಿಂಚಿತ್ ಮರ್ಯಾದೆ ಇದೆ, ನಾವು ಹೇಳೋದಿಲ್ಲ ...ಮೌನವಾಗಿರುತ್ತೇವೆ. ಮೌನೇನ ಕಲಹಂ ನಾಸ್ತಿ.

ಇನ್ನು ಕೆಲವರಿದಾರೆ, ಡಕಾಯಿತರು, ಕಿಂಗ್‌ಕಾಂಗುಗಳು. ಅವರ ಕಪಿಚೇಷ್ಟೆ ಕಂಡರೆ, ಕೆನ್ನೆಗೆ ಎರಡು ಬಿಗಿಯೋಣವೆನಿಸುತ್ತದೆ. ಆದರೆ, ಅವರ ಪುಣ್ಯ ಅವರ ಕೆನ್ನೆ ಎಲ್ಲೋ ಆಕಾಶದಷ್ಟು ಎತ್ತರದಲ್ಲಿದೆ .. ಮನೆಗೆ ಬರುತ್ತಲೂ, ನಾನು ಎಲ್ಲೋ ಜ್ಞಾನದಲ್ಲಿದ್ದರೆ, ಟೋಪಿ ಹಾರಿಸಿಬಿಡುವುದು, ಮುಚ್ಚಿರಿಸಿಬಿಡುವುದು .. .. ಆಟದ ಸಾಮಾನನ್ನು ಅವಿತು ಇಟ್ಟುಕೊಳ್ಳುವುದು.... ಅತ್ತರೂ ಕೊಡುವುದಿಲ್ಲ... ....ಶುದ್ಧ ಕಟುಕರು . ."ಲೋ! ನಿನ್ನ ತಮ್ಮನನ್ನ ನಾವು ಎತ್ತಿಕೊಂಡು ನಮ್ಮ ಮನೆಗೆ ಸಾಗಿಸಿ ಬಿಡುತ್ತೇವೆ" ಎನ್ನುವುದು ರಾಕ್ಷಸರು. ಇದನ್ನು ಕೇಳಿ ಅಪ್ಪ ಅಮ್ಮ ಕೂಡ ಸುಮ್ಮ ನಿದ್ದುಬಿಡುತ್ತಾರೆ, ಅದೇ ನನಗೆ ಆಶ್ಚರ್ಯ. ಪೋಲೀಸಿಗೆ ಹೇಳಿಕಳುಹಿಸುವುದೇ ಇಲ್ಲ. ಹೀಗಾದರೆ, ಇವರನ್ನು ನೆಚ್ಚಿಕೊಂಡು ನಾನು ಹೇಗೆ ಈ ಮನೆಯಲ್ಲಿ ಬದುಕು ವುದು? ...ಕೊನೆಗೆ, ಇಂತಹ ಕಾಡುಮನುಷ್ಯಗಳಿಂದ ನನ್ನ ಟೋಪಿ, ಆಟದಸಾಮಾನು, ತಮ್ಮ ಇವನ್ನೆಲ್ಲ ಅತ್ತು ಕರೆದು ಗಲಾಟೆಮಾಡಿ ನಾನೇ ಉಳಿಸಬೇಕಾಗಿ ಬರುವುದು.

ಅಂತು, ಇಂಥ ಧಾಂಡಿಗರೇ ಇಲ್ಲದ ಊರೇ ಇರಬೇಕು, ಸ್ವರ್ಗ ಎನ್ನುವುದು, ಅಲ್ಲವೆ?

— ಕುಮಾರ ಪಾಪು.

---

# ಗೊಂದಲದ ಗೀತೆ

(ಬ್ರಹ್ಮಚಾರಿಗಳಿಗೆ ಮಾತ್ರ)

---

ಆಯಿತೇನದು? ಹೋಯಿತೇನದು? ಹಾಯಿಗುಡುತಿಹೆಯೇತಕೆ?
ಮಾಯವಾಯಿತೆ ಆ ಮನೋರಥ? ಕಾಲಕಾಲಲಿ ನೂಕಿತೆ?

ಕೆಲಸ ಕೆಟ್ಟಿತೆ? ಬಯಕೆ ಸುಟ್ಟಿತೆ? ಮನಕೆ ಮುಟ್ಟಿತೆ ಬಿಟ್ಟಿತೆ?
ಕೂಗಿಬಿಟ್ಟರೆ? ಕೆಳಗೆ ಬೀಳಲು ಎಲ್ಲರೂ ಕಲ್ಲೊಗೆದರೆ?
ತದೆದುಬಿಡುವರೆ? ತದುಕಿಬಿಟ್ಟರೆ ತುರುಕಿ ಗೋಣಿಯಚೀಲಕೆ?
ಹಾಳುಮೂಳನು ನುಂಗಿಬಿಟ್ಟೆಯ? ಹೊಟ್ಟೆ ಗುರುಗುರುಗುಟ್ಟಿತೆ? — ೧ —

ಅಲೆಯುತಿರುವೆಯ ಕಾಲನೆಳೆಯುತ? ಗಲ್ಲಿಗಲ್ಲಿಗು ದರ್ಶನ
ಕತ್ತೆ ಕಿರುಚಿತೆ? ನಾಯಿ ಬೊಗುಳಿತೆ? ಬಿಕ್ಕಿನಂತಸ್ಪರ್ಶನ
ಕಲೆತು ರೈಲಿನ ಡೀಸೆಲೆಂಜಿನ ಮಧುರ ರುದ್ರಾಕ್ರಂದನ
ಹಾರುಮುನಿಯಮು ರೇಡಿಯೋಮೇಣ್ ಲೌಡುಸ್ಪೀಕರಗಾಯನ. — ೨ —

ಜಾರಿಬಿದ್ದೆಯ? ಹರಿದು ಚಪ್ಪಲಿ ಕ್ರಾಪು ಮಣ್ಣನು ಮುಕ್ಕಿತೆ?
ತೆರೆದುಬಾಯನು ಬಾಗಿ ಪಕ್ಕಕೆ ಹಲ್ಗಿರಿದು ಲೊಚಗುಟ್ಟಿತ,
ಹೋಗಿ ಹಾಯ್ದೆಯ? ಡಿಕ್ಕಿ ಹೊಡೆದೆಯ? ಹಲ್ಲು ಮುರಿಯಿತೆ ಸುರಿಯಿತೆ
ಒಸಡಿನಿಂದಾರಕ್ತ? ಗದ್ದಕೆ ಕೊಡೆಯ ತುದಿಗಳು ಬಡಿದವೆ? — ೩ —

ಕಂಡು ನೀಲೀ ಸೀರೆಯಂಚನು ಓಡಿಹೋದೆಯ? ರಸ್ತೆಯ
ಜಟಕ ಸೈಕಲು ಕಾರು ಲಾರಿಯ ಗಮನಿಸದೆ ಮುಂಬರಿದೆಯ?
ಆಹ! ಹೂವಿನದಂಡೆ ತುರುಬಿನಮೇಲೆ ನಗುನಗುತಿದ್ದಿತೆ?
ಹುಡುಗಿ ಕಂಡಳೆ? ಕಣ್ಣು ಮಿಟುಕಿಸೆ ಹೊಡೆದುಬಿಟ್ಟಳೆ ಕೆನ್ನೆಗೆ? — ೪ —

ಆದುದಾಯಿತು, ಹೋದುದಾಯಿತು, ಬಾಯಬಿಡುತಿಹೆಯೇತಕೆ?
ಮಾದಗಾಯವ ಕೆದಕೆ ಖುಷಿ ಖುಷಿ ಹಾಳುದುಃಖದ ಭೂತಕೆ.

— ಅ. ರಾ. ಸೇ.

— o —

# ಪೌರ-ಪ್ರಶ್ನ ಪತ್ರಿಕೆ

[ಪೌರಸಭೆಯ ಚಾಕರಿಗೆ ಸೇರಲು ಬಂದವರಿಗೆ ಒಂದು ಪ್ರವೇಶಾ ಪರೀಕ್ಷೆಯನ್ನು ಏರ್ಪಡಿಸುತ್ತಾರೆಂದು ವದಂತಿ.]

"ಹಾಗಾದಾಗ ಈ ಪ್ರಶ್ನಪತ್ರಿಕೆ ಹೀಗಿರಬಹುದೇ?"

---

ವೇಳೆ ೨॥ ಗಂಟೆ (ತಾಸು) ತಾ॥ ೧-೫-೫೫ (1-5-1955)

ವಿ. ಸೂ. ಖಾದಿಟೋಪಿ ಹಾಕಿಕೊಂಡು ಉತ್ತರಿಸುವವರಿಗೆ ಐದು ಅಂಕಗಳನ್ನು ಕಾದಿರಿಸಲಾಗಿದೆ-ಉತ್ತರಗಳನ್ನು ವೋಟಿಂಗ್ ಚೀಟಿಗಳಂತೆ ಗುಪ್ತವಾಗಿಡುವುದರಿಂದ ಪ್ರಶ್ನೆಗಳಿಗೆ ಧೈರ್ಯವಾಗಿ ಉತ್ತರ ಕೊಡಬಹುದು.

೧) 1) ಸಂಸ್ಕೃತಿಯನ್ನು ಪೌರಸಭೆಯು ಹರಡಬಹುದೇ? ಹಾಗೆ ಪ್ರಚಾರ ಮಾಡಿದರೆ ಪೌರೀಕರ ಮಟ್ಟ ಏರುತ್ತದೆಯೇ? ವಾ ಇಳಿಯುತ್ತದೆಯೇ? ಗ್ರಾಫ್ ಮೂಲಕ ವಿಶದೀಕರಿಸಿ.

೧೫-15

೨) 2) "ವಿಧಾನಸೌಧ"ಕ್ಕೆ ಎಷ್ಟು ಕಂದಾಯ ಹೊರಿಸಬಹುದು? ಪೌರಸಭೆಯ ದರಿದ್ರತೆಯನ್ನು ಲಕ್ಷ್ಯದಲ್ಲಿಟ್ಟುಕೊಂಡು, ವಿಧಾನಸೌದ ತಡೆಯಬಹುದಾದ ಅತಿ ಹೆಚ್ಚಿನ ಕಂದಾಯ ಎಷ್ಟು? ಸಕಾರಣವಾಗಿ ಸಮರ್ಥಿಸಿ.

೧೦-10

೩) 3) "ಚುನಾವಣಾ ವೇಶ" ಇದನ್ನು ಯಾರು ಎಲ್ಲಿ ಪ್ರಥಮವಾಗಿ ಹೇಳಿದರು? ಬ್ಯಾಲೆಟ್ ಪೆಟ್ಟಿಗೆಗಳನ್ನು ಮುದ್ರೆಯೊಡೆಯದೆ ಹರಿಯುವ ನಾಲ್ಕು ಉಪಾಯಗಳನ್ನು ವಿವರಿಸಿ.

ಈ ಚತುರತೆಯಲ್ಲಿ ಮೊದಲಿಗರು ಯಾರು? ೧) ಪಾಟೀಲ್ ೨) ಭೂಪಾಲನ್ ೩) ಸ್ವಕಾಶಂ ೪) ತುಂಬೇಸೊಪ್ಪು. ೫) ಬಿಂಕಯ್ಯ ೬) ಜೇಬ್ದಾರ್.

ಅಥವಾ ೧೫-15

ಕಾಂಗ್ರೇಸಿನಲ್ಲಿ ಒಡಕುಂಟೇ-ಇದ್ದರೆ ನೀವೇ ಶ್ರೀಯುತ ದೇಭಾರರೆಂದುಕೊಂಡು ಹೇಗೆ ಮೇಣ ಮೆತ್ತುತ್ತೀರಿ?

೪) 4) ಜಮೀನ್ದಾರಿ ಪದ್ಧತಿಯಿಂದ ಶ್ರೀಮಂತ ಜಮೀನ್ದಾರರಿಗುಂಟಾಗಿರುವ ನಷ್ಟವನ್ನು ಹೃದಯ ವಿದ್ರಾವಕವಾಗಿ ತೋಡಿಕೊಳ್ಳಿ. ಹಾಗೂ ಆಳಾದವನು ಅರಸನಾಗಿ ಹಾಳಾಗುವ ದೃಶ್ಯವನ್ನು ಚಿತ್ರಿಸಿ.

೧೦–10

೫) 5) ಇವುಗಳಲ್ಲಿ ನಾಲ್ಕಕ್ಕೆ ಮಾತ್ರ ಲಘು ಟಿಪ್ಪಣಿ ಬರೆಯಿರಿ.

ಅ) ಚಿನ್ನದಗಣಿ ಪ್ರಕರಣ ಆ) ಕಾಗೋಡು ಸತ್ಯಾಗ್ರಹ.

ಇ) ಮೈತ್ರೀ ಮೇಳ ಈ) ಕ್ರಾಸ್‌ವರ್ಡ್ ಅಥವಾ ಕಲ್ಲು ಕಟ್ಟಡ.

ಉ) ಬೀಡಿಗಾಗಿ ಕೈಮಾಡಿದವ ಊ) ಲಂಚ್‌ಸಮಿತಿ

ಋ) ಪಾನನಿರೋಧ ವಾ ಕ್ಷಾಮ. ೠ) ವ್ಯವಸಾಯ ತೆರಿಗೆ–ವಾ–ತಂಬಾಕು ಸುಂಕ. ಎ) ತಮಿಳು ಕಲಿತವರಿಗೆ ಹಿಂದೀ ಸುಲಭ. ಏ) ಹರಿಕಥೆಯಿಂದ ಪ್ರಮೋಷನ್. ಐ) ಸಂತಾನನಿರೋಧ ಮತ್ತು ಸೊಳ್ಳೆಗಳು.

೨೦–20

೬) 6) ಇವು ಎಲ್ಲಿವೆ? ಏತಕ್ಕೆ ಪ್ರಸಿದ್ಧಿ?–ಅದು ಹೇಗೆ ಹೇಗೆ ಸಂಬಂಧ?

೧) ಜಲಸನ್ನಿಧಿ–ಕೆಂಪಾಂಬುಧಿ–ವಿದ್ಯಾರ್ಥಿಗಳು.

೨) ಆಲಿ ಕಲ್ಲು–ಹಾಲುಗಲ್ಲು–ಕೆಂಗಲ್ಲು

೩) ಸಾರ್ವಜನಿಕ–ಸೇವಾ–ಸಮಿತಿ.

೪) ಮ್ಯೇಲ್ಮನೆ.–ಕೀಳ್ಮನೆ–ತ್ರಿಶಂಕುಮನೆ.

೫) ಹೆಸರುಘಟ್ಟ–ಬಸುರು–ಹಾಳು–ಕೊಸರುವಾಡಿ.

೭) 7) ಈ ವಿಷಯಗಳಲ್ಲಿ ಯಾವುದಾದರೂ ಒಂದರಮೇಲೆ ಎರಡು ಪುಟಗಳಿಗೆ ಮೀರದಂತೆ ಸಚಿತ್ರವಾಗಿ ಒಂದು ಪ್ರಬಂಧವನ್ನು ಬರೆಯಿರಿ.

ಅ) ವಿಲಕ್ಷಣ ಶಿಕ್ಷಣ ಸುಧಾರಣೆ ಮತ್ತು ಬೇಸಿಗೆ

ಆ) ನೊಂದ ವಿದ್ಯುತ್ ರಾಜಕೀಯ ಗಡಬಿಡಿ.

ಇ) ಎನ್, ಜಿ ಓಗಳು ಅಹರ್ನಿಶಿ ಓ ಓ ಓ ಮಾಡುವ ರೀತಿ.

ಈ) ಲಂಕೆಯಲ್ಲಿ ಸುಂಕದ ರಚನಾ ರೀತಿ.

ಉ) ಮೊಳಕೆಯಲ್ಲೇ ತೆರಿಗೆ ಹಾಕುವ ವಿಧಾನ.

ಊ) ಆರೋಗ್ಯ ತೆರಿಗೆ–ವಾ–ಮಾನಸಿಕ ಖಾಯಿಲೆಗಳು.

ಋ) ಪಂಚಶೀಲ ಮತ್ತು ಪೌರಸಭೆಗಳು.

ೠ) ಪೌರಪಿತೃಗಳಿಗೆ ಲಂಚ್ ಕೊಡುವುದರ ಆಗುಹೋಗುಗಳು.

೧೫–15

ಎ. ಜಿ. ಯಸ್ರಾವ್.

—o—

# ಡಾ|| ದಾಮು ನಿಶ್ಚಿತಾರ್ಥ?

ಎಡಗಣ್ಣು ಅದುರಿದ್ದು ಮೋಟಾರು ಇಳಿದಾಗ. ಎಡಭುಜ ಗುಡುಗಿದ್ದು ಎಡಗಾಲು ನಡುಮನೆಯ ಹೊಸಲು ದಾಟಿದಾಗ. ಎಂಬಿಬಿಎಸ್ ಅಲ್ಲವೇ ಅವರು, ಈ ಶಕುನಗಳಲ್ಲಿ ನಂಬಿಕೆ ಕಡಿಮೆ. ಈ ಅದುರುವುದು ಯಾವುದೋ ನರದ ಚೇಷ್ಟೆ ಅದಕ್ಕೂ ಬದುಕಿನ ಆಗುಹೋಗುಗಳಿಗೂ ಎಲ್ಲಿಯ ಸಂಬಂಧ ಎಂದು ನಡುಮನೆಗೆ ಹೋದರು ಡಾ|| ದಾಮೋದರರು. ಆದರೂ ದುರ್ಯೋಧನನಿಗೆ ಹೀಗೇ ನಡುಗಿತ್ತು ವೈಶಂಪಾಯನ ಸರೋವರದಡಿಯಲ್ಲಿ. ಕರ್ಣನಿಗೆ ಹೀಗೇ ಆಗಿತ್ತು ರಥ ಹೂತು ಹೋದಾಗ. ಉತ್ತರಕುಮಾರನ ದೇಹವೇ ನಡುಗಿರಲಿಲ್ಲವೆ? ಗೋಗ್ರಹಣದಲ್ಲಿ ಗ್ರಹಣವೇ ಹಿಡಿದಿರಲಿಲ್ಲವೆ? ಈ ಎಲ್ಲ ಪುರಾಣಗಳು ಒಂದುಕ್ಷಣ ಅವನನ್ನು ಅಧೀರನನ್ನಾಗಿ ಅದುರಿಸಿತು.

ತುಂಗಮ್ಮ ಹುಣಸೇಹಣ್ಣು ರಾಶಿಮಾಡಿಸುತ್ತಿದ್ದರು ಮೂಲೆಯಲ್ಲಿ — ಈಚೆ ಮೂಲೆಯಲ್ಲಿ ತೆಂಗಿನಕಾಯಿ ರಾಶಿಬಿದ್ದಿತ್ತು, ಆಚೆ ಕಡೆಗೆ ಭತ್ತದಮೂಟೆ — ಅಲ್ಲಲ್ಲಿ ಕುಂಬಳಕಾಯಿ ಸೋರೇಕಾಯಿ— ನಿಂಬೆಕಾಯಿ. ಎಳಸಾದ ನಿಂಬೆಕಾಯಿ ರಾಶಿ ನೋಡಿದಾಗ ಡಾ|| ದಾಮೂರವರಿಗೆ ಭಾವಿಮಾವಯ್ಯ ಕುಕ್ಕಿದಮಾತು "ಯಳಂದೂರು ಎಳೆನಿಂಬೆ ಅನ್ನಬೇಕಾದೀತು" ಎಂದದ್ದು ನೆನಪಿಗೆ ಬಂತು. ತಾನೇಕೆ ಕುಂಬಳಕಾಯಿ ಕಳ್ಳನಂತೆ ಹೆದರಬೇಕು? ಎಂದೆನಿಸಿತು ಕುಂಬಳ ನೋಡಿ ತೆಂಗಿನಕಾಯಿ ತನ್ನ ಮತ್ತು ರುಕ್ಕುವಿನ ಕೈಕೈಕೂಡಿಸುವ ಮಹಾಸಂಭ್ರಮದ 'ಕನುಕೊಂಟನಿ' ಊದಿಸುವ ವಿವಾಹಮಹೋತ್ಸವದ ನೆನಪು ತಂದಿತು.

ಮರುಕ್ಷಣವೇ ಹುಣಸೇಹಣ್ಣು ಕಿವಿಚಿ ಕದಡಿ ಕುಡಿಸಿದಂತಾಯ್ತು ಅವನ ಮುಖ. ಒಳಬಾಗಿಲಿಂದ ಸೋದರತ್ತೆ ಸುಂದರಮ್ಮ ಬಂದು ನಿಂತಿದ್ದಳು

"ದಾಮು ಬಂದನಲ್ಲಾ ತುಂಗತ್ತೆ" ಎಂದು ಆಶ್ಚರ್ಯದಿಂದ ಕಿವಿಯಿಂದ ಕಿವಿ ತನಕ ನಕ್ಕು ಈ ಅಚ್ಚರಿಯ ಸುದ್ದಿ ಸಾರಿದಳು.

"ದಾಮು .. ಯಾವಾಗ ಬಂದೆ?" ಎಂದು ಕೈಲಿದ್ದ ಸಾಸುವೆಮೊರ ಮಗ್ಗಲಿಗಿಟು ಹಾಕಿದ್ದ ಕನ್ನಡಕ ತೆಗೆದು ಹಿಗ್ಗಿದರು ಡಾ|| ದಾಮುವಿನ ಮಾತೋಶ್ರೀಯವರಾದ ತುಂಗಮ್ಮನವರು.

ಬೂಟು ಬಿಚ್ಚಿ-ಹ್ಯಾಟು ತೆಗೆದು-ಕೈಯ್ಯಲ್ಲಿನ ಚೀಲ ಭತ್ತದ ಚೀಲದಮೇಲಿಟ್ಟು ನಮಸ್ಕಾರಮಾಡಿ ಏಳುತ್ತಿದ್ದಂತೇ ಸುಂದರಮ್ಮನ ಹಿಂದೆ ನಾಗವೇಣಿ ಬಂದು ನಿಂತಿದ್ದಳು. ನಾಗವೇಣಿ-ಹೌದು ನಾಗರಮುರಿಯೇ ಅವಳು—ಆದರೇ ರುಕ್ಕುವಿನ ನಾಗರಿಕತೆ ಇಲ್ಲ-ಆ ವನಪು ವಯ್ಯಾರ ಹಳ್ಳಿಹುಡುಗಿಗೆಲ್ಲಿ ಬರಬೇಕು.

"ದಾಮೂ—ಶಾನೆದಿನ ಆಯ್ತುಕಣೋ ನೀನು ಬಂದು...."

"ಎಲ್ಲಿ ಬರ್ತಾನತ್ತೆ-ದೊಡ್ಡ ಡಾಕ್ಟ್ರು-ದೊಡ್ಡ ಊರು-ನಾವು ಬಡವರಾಯ್ತಲ್ಲ" ಎಂದು ಕೊಂಕಿಸಿದಳು ಸುಂದರಮ್ಮ.

"ನನ್ನ ವಿದ್ಯೆಗೆ—ನನ್ನ ಅಕಾರಕ್ಕೆ-ನನ್ನ ಅಂತಸ್ತಿಗೆ ತಕ್ಕ ಹೆಂಡತಿಯೇ ಬೇಕು" ಎಂದು ಬಹು ಧೈರ್ಯದಿಂದ ಹೇಳಿ ನಾಗವೇಣಿ ತನಗೆ ತಕ್ಕ ಹುಡುಗಿಯಲ್ಲ ಎಂದು ಕುಕ್ಕೇ ಹೋಗಿದ್ದ ದಾಮು ಹಿಂದೆ. ತುಂಗಮ್ಮ ಎಲ್ಲಾ ಅವರಜ್ಜಿಹಾಗೇ—ಕೋಪ ಮೂಗಿನ ತುದಿಗೇ ಇರುತ್ತೆ. ಆ ಕೋಪ ತಡಿಯೋಕೇ ಕಡಿವಾಣ ಹಾಕಿದಂತೆ ಕನ್ನಡಕಹಾಕಿ ಹಿಡಿದಿಟ್ಟಿದ್ದರು. ಕನ್ನಡಕ ತೆಗೆದರೆ ಕೋಪ ತಾರಕಕ್ಕೇರುತ್ತಿತ್ತು ತುಂಗಮ್ಮನಿಗೆ.

ನಾಗವೇಣಿ ಮನೆಹೆಣ್ಣು. ತುಂಗಮ್ಮನ ತಮ್ಮನ ಮಗಳು. ಹಿತ್ತಲಗಿಡ ಮದ್ದಲ್ಲಾಂತ ಈ ವೈದ್ಯಶಿಖಾಮಣಿಯ ಸಿದ್ಧಾಂತ. ಕರಳೂನ್ನೊ ಕಕಲಾತಿ ತುಂಗಮ್ಮನದು. ಈ ಉತ್ತರ ದಕ್ಷಿಣ ಧ್ರುವಗಳ ಸಂಘಟನೆಯಲ್ಲಿ ಬೆಂಗಳೂರಿಗೆ ಹೋಗಿದ್ದ ಡಾ|| ದಾಮು.

ತುಂಗಮ್ಮನ ಮಾತೇ ಒರಟು—ಸತ್ಯವಾದದ್ದು ಕಠೋರವಾದರೂ ಕಠಾರಿಯಂಥ ಮಾತೇ ಹೇಳುವ ಹಟವಾದಿ ಹೆಂಗಸು. "ಡಾ|| ದಾಮು ಎಲ್ಲಾ ಅವರಪ್ಪನಹಾಗೇ ಮುಖೇಡಿ ತನ್ನದೇ ವಾದ ಅರ್ಥವಿಲ್ಲದ ನಿರ್ಧಾರ" ಎಂದು ಅನೇಕಬಾರಿ ತುಂಗಮ್ಮ ಅಂದಿದ್ದರು. "ಈ ಒಂದು ಹುಡುಗನ್ನ ನನಗೆ ಒಪ್ಪಿಸಿ ಹೊರಟುಹೋದರು" ಎಂದು ಅತ್ತೂ ಇದ್ದಳು. ಮಾತು ಒರಟಾದರೂ, ಹೃದಯ ಹತ್ತಿ.

ಚೀಲದಲ್ಲಿನ ಪಂಚೆ ಉಡಬೇಕೆಂದು ತೆಗೆದಾಗ ಟಪಕ್ಕನೆ ಒಂದು ಟೇಪು—ಹೆಂಗಸರು ಜಡೆ ತುದಿಗೆ ಕಟ್ಕೊತಾರಲ್ಲ—ರೋಜಾಬಣ್ಣದ ಟೇಪು ಹೇರ್‌ಪಿನ್ನಿಗೆ ಕಟ್ಟಿದ್ದು ಬಿತ್ತು. ಡಾ|| ದಾಮು ಬೆವೆತ. ಅದು ಪುಟ್‌ಲಾಯರಿ ವಿಠ್ಠಲರಾಯರ ಮಗಳು ರುಕ್ಕಮ್ಮನ ಟೇಪು. ಸುಂದರಮ್ಮ ಅದನ್ನೆತ್ತಿಕೊಂಡಳು. ಒಂದೇ ಒಂದು ನಿಮಿಷ ತನ್ನ ಭಾಗ್ಯ ಬಾಗಿಲು ತೆರೆಯಿತೆಂದು ಭೋಗ್ಯಕ್ಕೆ ಹಾಕಿದ ಮನೆಯ ಚಿಂತೆಯನ್ನೂ ಮರೆತಳು. ಈ ಟೇಪು-ಪಿನ್ನು-ನಾಗವೇಣಿಗಾಗೇ ಡಾ|| ದಾಮು ತಂದಿರಬೇಕೆಂದು ತರ್ಕಿಸಿದಳು ಸುಂದರಮ್ಮ.

"ಏನದೂ " ಎಂದು ಕನ್ನಡಕ ಹಾಕಿಕೊಂಡರು ತುಂಗಮ್ಮ.

"ಟೇಪು-ರೋಜಾಟೇಪು-ಹೇರ್‌ಪಿನ್ನು" ಎಂದು ರೋಜಾಹೂವಿನಂತೆ ನಕ್ಕಳು ನಾಗವೇಣಿ ನಾಗವೇಣಿ ಅದನ್ನು ತೆಗೆದುಕೊಂಡು ಪಿನ್ನಿಗೆ ಹಾಕಿದ ಗಂಟು ಬಿಚ್ಚಿ ಟೇಪು ಬೇರ್ಪಡಿಸಿದಾಗ ಪುಟ್ಟದೊಂದು ಪತ್ರ ಬಿತ್ತು.

"ಸುಂದರತ್ತೆ ನೀರು—ತಣ್ಣನೇ ನೀರು" ಎಂದ ಡಾ॥ ದಾಮು ಅವಸರವಾಗಿ ಪಂಚೆ ಸುತ್ತಿಕೊಳ್ಳುತ್ತಾ.

"ನೀರ್‍ಯಾಕೋ ದಾಮು ನೀರು ಕುದಿತಾ ಇದೆ ಕಾಪಿಗೇ ಹಾಕ್ಕೊಡ್ತೀನಿ"

"ಕಾಪಿ ಆಮೇಲೆ—ತುಂಬಾ ಬಾಯಾರ್‍ಕೆ ನೀರು" ಎಂದಾಗ ಹುಬ್ಬಿನಮೇಲೆ ಹನಿಮೂಡಿತ್ತು. ನಾಗವೇಣಿ ಬಚ್ಚಲುಗಣ್ಣಿನಿಂದ ದಾಮುವನ್ನು ನೋಡಿದಳು. ಹೆತ್ತವ್ವನನ್ನು ಹೇಗಾದರೂ ನೆಪಹಾಕಿ ಹೊತ್ತುತಂದು ಬೆಂಗಳೂರು ಸೇರಿ ಆಮೇಲೆ ರುಕ್ಕುವಿನ ವಿಚಾರ ಹೇಳಿ ಕಾಲುಕಟ್ಟಿಕೊಂಡು ರುಕ್ಕುವಿಗೆ ತಾಳಿ ಕಟ್ಟಿಸುವ ಅವನ ಏರ್ಪಾಡು ತಳಕೆಳಗಾಯಿತು.

"ನೀರು ಕ್ವಾ ..." ಎಂದದ್ದು ಸುಂದರಮ್ಮ—ಆದರೆ ಕುಡಿಸುತ್ತಿದ್ದುದು ರುಕ್ಕು.

ನಾಗವೇಣಿಯ ನಾಲಗೆ ಬಲು ಚೂಪು. ಹುಡುಗಿ ಬಲು ಬಿಳುಪು ತಲೆ ಕೂಡಾ ಕೊಂಚ ಬಿಳುಪೆ! ಅದೊಂದುಬಿಟ್ಟರೆ ಹುಡುಗಿ ಅಪರಂಜಿ. ಕಾಗದ ಓದಿ ಹುಣಸೆಹಣ್ಣಿನ ರಾಶಿ ಬಳಿ ಕೆಟ್ಟಮುಖಮಾಡಿಕೊಂಡು ಕೂತಳು ನಾಗು.

ನಿಜ ಅವಳಿಗೆ ಡಾ॥ ದಾಮೂರವರ ಕೈಯೇ ಹಿಡಿಯಬೇಕೆಂಬ ಪ್ರೀತಿ ಚಿಕ್ಕವಳಿಂದಲೂ ಇತ್ತು. ಹಳ್ಳಿಗಮಾರಿ—ರುಕ್ಕುವಿನಹಾಗೆ ಗುಬ್ಬಳಿ ಎರಡು ಜಡೆ ಇಲ್ಲ —ತಿಳಿಸೀರೆ ಒಳಲಂಗ ಕೇಳಲೇಬೇಡ-ಪೌಡರಿಲ್ಲ-ಕೆಂಪು ರಂಗಿಲ್ಲ ತುಟಿಗೆ ಇದೆಂತಹ ಕಾಡುಪಾಪ ಎಂದು ಕಣ್ಣಿಲ್ಲದ ಕೋಡಂಗಿಯಂತೆ ಯೋಚಿಸಿದ್ದ ದಾಮು.

"ಯಾತರದ್ದೆ ಅದು ಕಾಗದ-ಟೇಪು ಪಿನ್ನು ....ಓದಿ ಹೇಳಬಾರದೇನೆ ಸುಂದ್ರಾ" ಎಂದವರು ತುಂಗಮ್ಮ

"ಬೇಡ—ಈ ಕಡೆ ಕೊಡು ಸುಂದರತ್ತೆ " ಎಂದರು ಡಾ॥ ದಾಮು.

"ಈ ಟೇಪು-ಈ ಪಿನ್ನು-ನಾಗವೇಣಿಗಲ್ಲವೆ ನೀನು ತಂದದ್ದು?" ನಾಗರಮುರಿ ಈ ಮಾತಿಗೆ ಮುಖಮುಚ್ಚಿ ಅತ್ತೇಬಿಟ್ಟಿತು ಈಗಮಾತ್ರ ತುಂಗಮ್ಮನಿಗೆ ಕೋಪ ಬಂದು ಕನ್ನಡಕ ತೆಗೆದಳು.

"ಲೇ ದಾಮು ಇದೇನೋ ನಿನ್ನ ಕಾರುಬಾರು-ಆ ಹುಡುಗಿನ್ನ ಯಾಕೆ ಗೋಳು ಹುಯ್ಕೊಯ-ಈಗಿನ ಕಾಲದ ಹುಡುಗರೇ ಹಾಗೆ ಮದುವೆಗೆ ಮುಂಚೆ ಕಾಗದ ಬರಿ

ಯೋ(ಗು–ದೊಡ್ಡ ಡಾಕ್ಟ್ರು–ಚಿಕ್ಕ ಟೀಪು ಮೂರುಕಾಸಿನ ಪಿನ್ನು ತರೋದೆ ಅವಳಿಗೇ–ನಾಗವೇಣೀ ಅಳಬೇಡ ಕೂಸು—ನಾನು ನಿನಗೆ ಬೇಕಾದ್ದು ಕೊಡಿಸ್ತಿನಿ" ಎಂದು ಸಂದಿಗ್ಧಪರಿಸ್ಥಿತಿಯಲ್ಲಿ ಸಮಾಧಾನದ ಸಂಚು ಹೂಡಿದಳು ತುಂಗಮ್ಮ

"ಸುಂದರತ್ತೇ ೀ ... ಇನ್ನೊಂದು ಲೋಟಾ ನೀರು . "

"ಬೇಡ–ಬೇಡ ಸುಂದರು ನೀರು ಕೊಡಬೇಡ ಅವನಿಗೆ. ಪಾಪ ನಾಗವೇಣಿಗೆ ಮದುವೆಗೆ ಮೊದಲೇ ಯಾಕೆ ಕಾಗದ ಬರೆದ ಇವನು?—ಅದಕ್ಕೆ ಶಿಕ್ಷೆ ನಾಗು ನೀನೇ ಒಳಕ್ಕೆ ಹೋಗಿ ಕಾಫಿ ತಂದು ದಾಮುಗೆ ಕೊಡು"

—ಸುಂದರಮ್ಮ ಕಾಗದ ಓದದೇ ಡಾಕ್ಟರಕೈಗೆ ವಾಪಸ್ ಕೊಟ್ಟಿದ್ದಳು. ಓದಿ ಕೊಡಬಾರದಾಗಿತ್ತೇ ಎಂದು ವಿಲಿವಿಲಿ ಒದ್ದಾಡಿದಳು. ನಾಗವೇಣಿಯ ದುಃಖ ಅವಳಿಗೇ ಗೊತ್ತು. ಏನು ಬರೆದಿತ್ತು ಆ ಪುಟ್ಟ ಕಾಗದದಲ್ಲಿ!

"ಬೇಡಮ್ಮ ನನಗೆ ಕಾಫಿ "

"ಹ್ಯಾಗೆ ಬೇಕಾಗತ್ತೆ ನಾನು ಕೊಟ್ರೆ! ತುಂಗತ್ತೆ ಗೊತ್ತಿತ್ತು ಹೀಗಾಗುತ್ತೆಂತ" – ಬಹು ಧೈರ್ಯದಿಂದ ಬರಿದಾದ ಹೃದಯ ಭಾರವಾದ ಮನಸ್ಸಿನಿಂದ ಬಿಕ್ಕಿದಳು ನಾಗವೇಣಿ.

"ಸಾಕುಕಣೆ ನಿನ್ನ ಮಾತು—ಊರಿಂದ ಈಗತಾನೆ ಬಂದಿದಾನೆ, ಬಂದತಕ್ಷಣ ಇದೇನು ರಂಪ ತೆಗೆದೆಯೇ. ಮತ್ತೆ ಓಡಿಹೋದಾನು ಬಂದ ದಾರೀಲಿ....ಈಗ ಆದ ದ್ದಾದರೂ ಏನು?" ಎಂದು ಹೇಳಿದಾಗ ತುಂಗಮ್ಮನ ಮೂಗಿನ ತುದಿ ಕೆಂಪಾಯಿತು ಡಾ|| ದಾಮುವಿಗೆ ಏನುಮಾಡಬೇಕೋ ತೋಚದೆ ಒಂದೇಸಮ ಬೆವರುತ್ತಿದ್ದ.

ಸುಂದರಮ್ಮ ಒಂದು ಕೊಡ–ಒಂದು ತಂಬಿಗೆ–ಒಂದು ಲೋಟ ತಂದು ಮುಂದಿಟ್ಟಳು. ನಾಗವೇಣಿಯನ್ನು ತಕ್ಕೈಸಿ ಒಳಕ್ಕೆ ಅಡಿಗೆಮನೆಗೆ ಕರೆದೊಯ್ದು ಕೇಳಿದಳು ಸುಂದರಮ್ಮ—"ಏನು ನಾಗು ವಿಷಯ"

"ಏನು ಹೇಳಲಿ ಅಮ್ಮ—ಅದ್ಯಾರೋ ರುಕ್ಕಮ್ಮನಂತೆ ಅವಳನ್ನ ಕೇಳಿದರೆ ತಿಳಿದೀತು" ಎಂದು ಬಿಕ್ಕಿದಳು ನಾಗವೇಣಿ "ಆಂ" ಎಂದು ಗಾಬರಿಯಾದಳು ಸುಂದರಿ.

ಇಲ್ಲಿ ನಡುಮನೆಯಲ್ಲಿ—

"ಅದೇನು ಚೀಟಿಯೋ ದಾಮು"ಎಂದು ಕನ್ನಡಕಹಾಕಿ ಕೇಳಿದರು ತುಂಗಮ್ಮ. ಚೀಟಿ–ಸ್ವಂತ ಕೈಯಿಂದ ರುಕ್ಕು ಬರೆದದ್ದು. ಎಂತಹ ಜಾಣೆ—"ನಾನೇ ಆ ಪಿನ್ನು,

ನಿಮ್ಮ ಪ್ರೇಮವೇ ಆ ಟೀಪು, ನಮ್ಮಿಬ್ಬರನ್ನು ಬಿಗಿದ ಗಂಟು ಬ್ರಹ್ಮಗಂಟು ನಿಮ್ಮ ಭಾವೀ ಪ್ರೇಯಸಿ ರುಕ್ಕು" ನಾಗವೇಣಿ ಹೀಗೆ ಬರೆಯುತ್ತಿದ್ದಳೇ-ಬೇಕಿದ್ದರೆ ಹುಣಸೇ ಹಣ್ಣು ಬಿಡಿಸಿಯಾಳು ಎಂದೆಲ್ಲಾ ಯೋಚನಾತರಂಗದಲ್ಲಿ ತೇಲುತ್ತಿದ್ದ ದಾಮು. ಮತ್ತೆ ಎಚ್ಚರಿಸಿದಳು ತುಂಗಮ್ಮ "ಯಾರ ಕಾಗದ ಅದು" ಮೂಗು ಮತ್ತಷ್ಟು ಕೆಂಪ ಗಾಗಿತ್ತು, ಕನ್ನಡಕ ಅದರ ಗೂಡು ಸೇರಿತ್ತು.

"ಆಂ ... ಊಂ ಕಾಗದ" ತಬ್ಬಿಬ್ಬಾಡಿದ ಡಾ|| ದಾಮು

"ರುಕ್ಕಮ್ಮ ಯಾರು?" ಈ ಪ್ರಶ್ನೆ ಬಂದದ್ದು ಅಡಿಗೆಮನೆ ಬಾಗಿಲಿಂದ ಸುಂದರ ಮ್ಮನ ಸಿಟ್ಟಿನ ಸೊಟ್ಟಬಾಯಿಂದ.

"ನೀರು ಬೇಕಿತ್ತೇನೋ ಕುಡಿಯೋಕೆ" ಎಂದು ಹೆಡೆ ಆಡಿಸಿತು ನಾಗರಮರಿ. ಒಣಗಿದ ತುಟಿಯಮೇಲೆ ನಾಲಿಗೆ ಆಡಿಸಿದರು ಡಾ|| ದಾಮು. ಎಲ್ಲಾ ಒಗಟೆನಂತಿತ್ತು ತುಂಗಮ್ಮನಿಗೆ. "ದಾಮು—ಅದೇನಪ್ಪ ಅದು ನಾಗವೇಣಿ ಅಂತಿರೋದು, ವಿಷಯ ಏನು?"

ಈ ಪ್ರಶ್ನೆಗೆ ಉತ್ತರಕೊಡಲು ತನ್ನ ಪಕ್ಕದಲ್ಲಿ ಭಾವಿಮಾವಯ್ಯ ವಿಠ್ಠಲರಾಯ ರಿದ್ದಿದ್ದರೆ? ಎಂದೆನಿಸಿತು ಡಾಕ್ಟರಿಗೆ. ಏನಾದರೂ ಹೇಳಲೇಬೇಕಿತ್ತು.

"ಅಮ್ಮಾ ನೀನು ಬೆಂಗಳೂರಿಗೆ ಬರಬೇಕು ..."

"ಸರಿಹೋಯ್ತು-ಕೊಯ್ಲು ಕಾಲ-ತೋಟದಿಂದ ತೆಂಗಿನಕಾಯಿ ಇಳಿಸಬೇಕು-ಹುಣಸೇಹಣ್ಣು ಮಾರಬೇಕು ಮುಂಡಿಗೆ-ಒಂದೇ ಎರಡೇ ನಾನು ಅಲ್ಲಿ ಬಂದು ಕೂತರೆ ಹ್ಯಾಗೋ"

"ಹ್ಯಾಗೋ ನೀನು ಮನಸ್ಸುಮಾಡಿದರೇ ನನಗೆ ಸಮಾಧಾನ. ಒಬ್ಬನೇ ಎಷ್ಟು ದಿನ ಇರ್ಲಿ ಹೋಟ್ಲು ಊಟ ಬೇಜಾರು.

"ನಿನಗೆ ಬುದ್ಧಿ ಇದೇಂತ ಯಾರು ಹೇಳ್ತಾರೊ. ಬೆಳೆದುನಿಂತ ನಾಗವೇಣಿ ಕತ್ತಿಗೆ ತಾಳಿಕಟ್ಟಿ ಕರ್‍ಕೊಂಡುಹೋಗೂಂತ ಬಡುಕೊಂಡು ಬಾಯಿ ಬಿದ್ದುಹೋಯ್ತು ....ಇಲ್ಲೆ ಇರಪ್ಪಾ ನಿನ್ನ ಡಾಕ್ಟರಗಿರಿ ಸಂಪಾದ್ನೆಗಿಂತ ಸಾವಿರರೂಪಾಯಿ ವರ್ಷಕ್ಕೆ ಹೆಚ್ಚಾಗಿ ಬರುತ್ತಂದ್ರೆ ಕೇಳೊಲ್ಲ-ಈ ಮುದುಕೀನ ಯಾಕೋ ಗೋಳುಹುಯ್ದಿಯ-" ಎಂದು ಕೋಪದಿಂದ ಹೇಳಿದಾಗ ದಾಮು ನಡುಗಿದ. ನಾಗವೇಣಿ ನಕ್ಕಳು. ಆದರೆ ಈ ರುಕ್ಕು ಯಾರು? ಎನ್ನುವುದು ಅವಳು ತಿಳಿಯಬೇಕಿತ್ತು ಸುಂದರಮ್ಮನೇ ಮತ್ತೆ ಮಾತಾಡಿದ್ದು.

"ಅಲ್ಕಣೋ ದಾಮು ತುಂಗತ್ತೆನ್ನ ಹ್ಯಾಗೋ ಕರ್‍ಕೊಂಡುಹೋಗ್ತಿಯ-ಈಗೇ ನಪ್ಪ ಅಂಥಾ ಕೆಲಸ ..."

"ನೀನು ಸುಮ್ಮನಿರು ಸುಂದ್ರು ... ಅಪ್ಪಾ! ಅವರು ಖಂಡಿತ ಕರ್‍ಕೊಂಡೇ ಬಾ ಅಂತ ಹೇಳಿದಾರೆ"

"ಯಾರೊ?"

"ಫುಟ್ ಲಾಯರು ವಿಠ್ಠಲರಾಯರು"

"ವಿಠ್ಠಲರಾಯರೂ ೂ....." ಎಂದು ತುಂಗಮ್ಮ ಸುಂದರಮ್ಮ ಮುಖ ಉದ್ದ ಮಾಡಿ ಮೂರ್ಛೆಹೋದವರಂತೆ ಕೂಗಿದರು. ಕೊಂಚ ಸುಧಾರಿಸಿಕೊಂಡು ತುಂಗಮ್ಮ ಹೇಳಿದರು—

"ಅವರೆಲ್ಲಿದ್ದಾರೆ ಈಗ"

"ಬೆಂಗಳೂರು ನಮ್ಮನೇಲಿ"

"ವಿಷಯ ಗೊತ್ತಾಯ್ತು ದಾಮು—ಅವರಿಲ್ಲಿಗೆ ಬಂದಿದ್ದರು. ಆ ಗಣೇಶನ ಸೊಂಡಿಲಿನಂಥಾ ಮೂಗಿನ ಹುಡುಗಿ ನಮಗೆ ಬೇಡ"

—ಡಾ|| ದಾಮುಗೆ ಒಂದೇಸಮ ತಲೆತಿರುಗಿದಂತಾಯ್ತು. ಎಂತಹ ಸಂಧಿಗ್ಧ ಅಡಕತ್ತರಿಯಲ್ಲಿ ಸಿಕ್ಕುಬಿದ್ದ ದಾಮು. "ಆಂ ಎಂಥಾ ಮಾವ ಇಲ್ಲಿಗೆ ಬಂದು ಇಲ್ಲಾ ಅನ್ನಿಸಿಕೊಂಡು ಅಲ್ಲಿಗೆ ಬಂದು ಬಲೆ ಬೀಸಿದನಲ್ಲಾ" ಎಂದು ಮನಸ್ಸಿನಲ್ಲೆ ನೊಂದು ಕೊಂಡ.

"ಆ ಹುಡುಗಿ ಹೆಸರು ರುಕ್ಕುವೇ ೯" ಎಂದು ರಾಗ ತೆಗೆದಳು ಸುಂದರಮ್ಮ. "ಅದೇನು ಆಕಾರವಮ್ಮ ಅದರದ್ದು" ಎಂದು ಅದೊಂದು ಮೃಗವೊ ಎಂಬಂತೆ ಕಿಸಿ ಕಿಸಿ ನಕ್ಕಳು ನಾಗವೇಣಿ. ಹಾವಿನಂತೆ ನಾಲಿಗೆ ಹೊರಕ್ಕೆಳೆದು ತುಟಿ ಸವರಿಕೊಂಡಳು. ಪಾಪ ಕಪ್ಪೆಯಂತೆ ಕಂಗಾಲಾಗಿದ್ದ ಡಾ|| ದಾಮು.

"ಎಲ್ಲಾ ಅವರಪ್ಪನಹಾಗೇ - ಒಂದೂ ಗೊತ್ತಾಗೊಲ್ಲ" ಎಂದು ಮತ್ತೆ ಪಶ್ಚಾತ್ತಾಪಪಟ್ಟಳು ತುಂಗಮ್ಮ.

"ಆಂ....ಉಂ . ಅವರಿಗೆ ಹ್ಯಾಗಮ್ಮ ಇಲ್ಲಾನ್ನೋದು....ಮತ್ತೇ .. ಉಂ.... ಅಂ....ಆರೋಗ್ಯ–ನಾಡಿ–ಎತ್ತರ–ತೂಕ–ವರ್ಚಸ್ಸು"

"ರಾಮ ರಾಮ ಸಾಕಪ್ಪ ನಿನ್ನ ತೊದಲುಮಾತು. ಯಾರು ನಿನಗೆ MBBS ಡಿಗ್ರಿ ಕೊಟ್ರೋ....ಇಲ್ನೋಡು ದಾಮು—ಆ ರಾಯ ಇಲ್ಲಿಗೆ ಬಂದಿದ್ದ–ನಿಮ್ಮ ರಾಮು ಚಿಕ್ಕಪ್ಪನೇ ಇಲ್ಲಿಗೆ ಕಳಿಸಿದ್ದಂತೆ–ಮಾತೇನೋ ಚೆನ್ನಾಗಿ ಆಡ್ತಾನೆ–ಹುಡುಗಿ ಚೆನ್ನಿಲ್ಲ ನಿನಗೆ ಕಣ್ಣಿಲ್ಲವೇನೋ ನೀನು ನೋಡ್ಲಿಲ್ವೇ...."

"ನೋಡ್ದೆ ಅಮ್ಮ ಓದ್ದೋಳು ಕಸೂತಿ–ಹಾಡು–ಒಪ್ಪು ಓರಣ"

"ಸಾಕ್ಕಣೊ ನಿನ್ನ ವಕಾಲತ್ತು — ಆ ವಿಠ್ಠಲರಾಯರೇ ವಾದಕ್ಕೊ ನಿನ್ನ ತಯಾರುಮಾಡೇ ಕಳಿಸಿದಾರೇನೋ ...ಕಡಲಾಚೆಗೆ ಹೋಗಿ ಬಂದದ್ದೊಂತ ಕಾಡು ಪಾಪನ್ನ ಕಟ್ಕೊಂಡ್ರಂತೆ ಯಾರೋ. ಈಗಾ ನೀನು ಅವನ್ಯಾಕೆ ಮನೆಗೆ ಸೇರಿಸಿದೆ"

"ಅವರೇ ಬಂದ್ರು ನನ್ನ ಕಾರಲ್ಲಿ"

"ಅವರಿಗೇನು ಹೇಳಿದ್ದಿ ಈಗ?"

"ನಿನ್ನ ಕರ್ಕೊಂಡುಬಂದು ಮುಂದಿನ ಮಾತಾಡ್ತೀನೀಂತ...."

"ಅಷ್ಟೇನೋ"

"ಅಷ್ಟೆ"

"ಒಂಪ್ಕೊಂಡು ಬಂದಿಲ್ವಲ್ಲಾ"

"ಇಲ್ಲ"

"ದೇವರಾಣೆ"

"ನಿನ್ನಾಣೆ"

"ಸರಿ"—ಎಂದು ಯಾವುದೋ ನಿರ್ಧಾರದ ನಿಚ್ಚಳ ನಿಟ್ಟುಸಿರುಸುಯ್ದರು ತುಂಗಮ್ಮ. ಮತ್ತೆ ಅವರೇ ಹೇಳಿದರು—

"ಸುಂದರೂ ನಿನ್ನ ಗಂಡನಿಗೂ ಹೇಳು—ನಾಗವೇಣೀ ನೀನೂ ಹೊರಡು.... ದಾಮು ನಾನು ಮಾತಾಡ್ತಿನಿ ಅವರ ಹತ್ರ ನಾಳೆ ಹೊರಡೋಣ"

—ಎಂದಾಗ ಸದ್ಯ ಬಚಾವಾದೆ ಎಂದು ಬೆವರೊರಸಿದ. ನಾಗವೇಣಿ ಕಣ್ಣಿಂದ ಹೊಳಪು ಮಿಂಚಿತು. ಸುಂದರಮ್ಮ ಸೆರಗು ಹೊದ್ದಳು. ಇನ್ನು ನೀನುಂಟು—ಆ ವಿಠ್ಠಲ ಉಂಟು ಎಂದು ಅಮ್ಮನನ್ನೇ ನಂಬಿ ದೇವರಿಗೆ ಕೈಮುಗಿದ.

(ಮುಂದಿನ ತಿಂಗಳು ನಿಶ್ಚಿತಾರ್ಥ)

— ದಾಶರಥೀದೀಕ್ಷಿತ್.



# ಮೇರು ಕ್ರೀಡೆಗಳು

ಯಾವನೋ ಯಃಕಶ್ಚಿತ ಬ್ಯಾನಿಸ್ಟರನೋ, ಲ್ಯಾಂಡಿಯೋ 3.854 ನಿಮಿಷಗಳಲ್ಲಿ ಒಂದುಮೈಲಿ ಓಡಿದನಂತೆ. ಲೋಕದವರೆಲ್ಲಾ ಬಾಯಿಬಿಟ್ಟರಂತೆ. ಡಿಲರ್ಡನು 10 6 ಸೆಕೆಂಡಿನಲ್ಲಿ ನೂರು ಮೀಟರ್ ಓಡಿದನಂತೆ. ಅದನ್ನು ಮುರಿಯುವ ರಿಕಾರ್ಡಿಗರು ಇನ್ನೂ ಹುಟ್ಟಿಲ್ಲವಂತೆ. ಬದನೆಕಾಯಿಭೂತ! ಅಸಂಬದ್ಧ ಪ್ರಲಾಪ!!

ಒಂದು ಸೆಕೆಂಡಿನಲ್ಲಿ ನೂರು ಮೀಟರ್ ಓಡಿದ ಧೀರರಿರುವಾಗ ಇವರದೂ ಒಂದು ರೆಕಾರ್ಡೇ. ಕ್ರಿ. ಪೂ. ೧೨೫೦೦ನೇ ವರ್ಷದ ಆಶ್ವಯುಜ ಶುದ್ಧ ದಶಮಿಯ ದಿನ, ಮತ್ಸ್ಯ ನಗರದ ಮಹಾಕ್ರೀಡಾಪಟು ಉತ್ತರ್ ಕುಮಾರ್ ಎಂಬುವರು ಹಾಪ್, ಸ್ಟೆಪ್, ಅಂಡ್ ಜಂಪ್, ಮತ್ತು ನೂರು ಮೀಟರ್ ಓಟಗಳಲ್ಲಿ ಅಚ್ಯುತವಾದ ರೆಕಾರ್ಡ್ ಸ್ಥಾಪಿಸಿಬಿಟ್ಟರು ಸ್ಟಾರ್ಟಿಂಗ್ ಕೊಟ್ಟು, ಅಂಪೈರ್ ಅರ್ಜುನ್ (ಲೆಫ್ಟಿನೆಂಟ್ ಕರ್ನಲ್) ಗಡಿಯಾರ ನೋಡುವಷ್ಟರಲ್ಲಿ 66.9 ಅಡಿ ಹಾಪ್‌ಸ್ಟೆಪ್ ಜಂಪ್‌ಮಾಡಿ, ನೂರು ಮೀಟರ್ ಓಡಿದ್ದರು, ಉತ್ತರ್‌ಕುಮಾರ್.

ಹೀಗಿರುವಾಗ ಒಲಿಂಪಿಕ್ ಕ್ರೀಡಾ ರೆಕಾರ್ಡುಗಳು ನಮಗಿಲ್ಲ ಎಂದು ಭಾರತೀಯರಾದ ನಾವು ಚಿಂತಿಸುವುದರಲ್ಲಿ ಪಾಯಿಂಟೇನಿದೆ? ಹಿಂದೆ, ಒಂದಾನೊಂದು ಓಬೀರಾಯನ ಕಾಲದಲ್ಲಿ (ರಾಮನು ಕಾಡಿಗೆ ಹೋದಾಗ) ನಾವು ಮೇರುಕ್ರೀಡೆಗಳಲ್ಲಿ ಸ್ಥಾಪಿಸಿದ ರೆಕಾರ್ಡುಗಳು ಬಾತಿಗುಡ್ಡದಂತೆ ಬಿದ್ದಿರುವಾಗ, ಇಂದಿನಂದು ಕಷ್ಟಪಡಲೇಕೆ?

ನಿಮಗೆ ಎಷ್ಟು ಇನ್ಸ್‌ಟೆನ್ಸುಗಳು ಬೇಕು.

ಪುರುಷಾಮೃಗದೊಡನೆ ಮಾನಸ ಸರೋವರದಿಂದ, ದೆಹಲಿಯವರೆಗೆ ಮ್ಯಾರಥಾನ್‌ರೇಸ್ ಓಡಿ ಗೆದ್ದ ಭೀಮನೆದುರಿನಲ್ಲಿ ಇಂದಿನ ಒಲಂಪಿಕರು, ಹಾರುವ ತಟ್ಟೆಗಳೆದುರು $HT_2$ ಇದ್ದಹಾಗಲ್ಲವೇ?

ಪಾಟ್‌ಪಟ್ಟಿನಲ್ಲಿ ವಾಲಿಯ ಇದಿರಿನಲ್ಲಿ ಇಂದಿನ ಬಾಲವಿಲ್ಲದ ಕಪಿಪುತ್ರರು ಸ್ಪರ್ಧಿಸಲು ಸಾಧ್ಯವೇ? ದುಂಧುಬಿ ಎಂಬ ಮಹಿಷರಾಕ್ಷಸನನ್ನು ವಾಲಿ ಎತ್ತಿ

ಒಸೆದಾಗ, ಆ ರಾಕ್ಷಸನು ೧೨ ಮೈಲಿ ದೂರದಲ್ಲಿ ಬಿದ್ದನಂತೆ. ಅಂದವೇಲೆ ಹ್ಯಾಮರ್ ಥ್ರೋಯಿಂಗಿನಲ್ಲಿಯೂ ವಾಲಿಯದೇ ವಿಕ್ರಮ. ನೇಲ್ ಬೋರ್ನಿಗೆ ವಾಲಿ ಬಂದರೆ, ಅಲ್ಲಿಂದ ಅವನೆಸೆದ ಸೀಸದ ಚೆಂಡು ಕಾಲ್‌ಗೂರ‍್ಲಿಗೂ, ಹ್ಯಾಮರ್ ಕೂಲ್ ಗಾರ್ಡಿಗೂ, ಜಾವೆಲಿನ್ ಪೆರ್ತ್‌ ಅಥವಾ ಫ್ರೀಮ್ಯಾಂಟಲಿಗೂ ಹೋಗಿ ಬೀಳುತ್ತದೆ.

ಹೈ ಮತ್ತು ಲಾಂಗ್ ಜಂಪುಗಳಲ್ಲಿ ಹನುಮಂತರಾಯರದೇ ಅಪ್ರತಿಹತ ವಾದ ರೆಕಾರ್ಡು. ಆಗಸಕ್ಕೆ 3 ಮೈಲು ಎತ್ತರ ಜಿಗಿದದ್ದಲ್ಲದೆ, ರಾಮೇಶ್ವರದಲ್ಲಿ ಎಗರಿದ ಶ್ರೀಯುತರು ಟ್ರಿಂಕಾಮಲಿಗೆ ಹೋಗಿ ಇಳಿದರು. ಈ ವಿಕ್ರಮಗಳೆಲ್ಲಿ 7 ಅ; 3.9879 ಅಂಗಳೆಲ್ಲಿ. ಮೇರುಪರ್ವತವನ್ನೇ ಎತ್ತಿದ L. P. ರಾವಣ್ ಅವರೆದುರಿನಲ್ಲಿ ಸಾವಿರಪೌಂಡೆತ್ತುವ ಆರುಕಾಸಿನ ಕಡಲೆ ಛಾಂಪಿಯನ್ನರೇ? ಇಂತಿವೆ ಪಿಂತಿನ ವಿಕ್ರಮಂಗಳ್. ಹಿಂದೆ L. P. ರಾವಣಾಸುರರು ಋಷ್ಯಮೂಕಾಗ್ರದಲ್ಲಿ ಮೇರುಕ್ರೀಡಾ ಸ್ಪರ್ಧೆಗಳನ್ನೇರ್ಪಡಿಸಿದಾಗ, ಗ್ರೀಸಿನಿಂದ ಒಲಿಂಪಿಕ್ ಛಾಂಪಿಯ ನ್ನರು ಸ್ಪರ್ಧೆಗೆ ಬಂದಿದ್ದರಂತೆ. ಸ್ವಾಗತ ಸಮಿತಿಯ ಕಾರ್ಯದರ್ಶಿ ಕುಂಭಕರ್ಣ (ಜನರಲ್) ರೆಂಬುವರು ಸ್ವತಃ ಈ ವಿದೇಶೀಯರ ಸ್ವಾಗತಕ್ಕೆ ಬಂದರು. ಅವರಿಗೆ ನಿದ್ದೆಯ ಮಬ್ಬು ಇನ್ನೂ ಆರಿರಲಿಲ್ಲ. ಆ ಮಬ್ಬಿನಲ್ಲಿ ಯವನರ ಕೈಯನ್ನು ಬಿಟ್ಟು ಕಾಲನ್ನೆ ಷೇಕಿದರಂತೆ. ಆ ಕ್ರೀಡಾಪಟುಗಳ ಪ್ರಾಣವನ್ನುಳಿಸಲು ಧನ್ವಂತರಿ ಪೆನಿಸಿ ಲಿನ್ ಅಪ್ಪನ ಆಯಿಂಟ್ ಮೆಂಟ್ ಉಪಯೋಗಿಸಬೇಕಾಯ್ತಂತೆ.

ಸ್ವಿಮಿಂಗಿನಲ್ಲಿ ವಿಷ್ಣು, ರೋಲರ್ ಸ್ಕೇಟಿಂಗ್, ಸ್ಕೀಯಿಂಗ್ etc ಹಿಮ ಕ್ರೀಡೆಗಳಲ್ಲಿ ನಳಕೂಬರ, ಮಣಿಗ್ರೀವ ಇತ್ಯಾದಿ. ರೆಸ್ಲಿಂಗಿನಲ್ಲಿ ಭೀಮನೆದುರು ಇಂದಿನ ಛಾಂಪಿಯನ್ನರು ಬಂದರೆ 'ಸಂದರ್ಶೈ ಭಾನುಜನ ಪಟ್ಟಣ ಕಂದು ಐನೂರು' ಆಗಬೇಕಾದೀತು. ಹುಡುಕುತ್ತಾ ಹೋದರೆ ಇಂತಹ ಸಾವಿರ ರೆಕಾರ್ಡುಗಳು.

ಒಲಿಂಪಿಕ್ ಕ್ರೀಡಾಪಟುಗಳು ಕನಸಿನಲ್ಲೂ ಕಾಣದ ಕ್ರೀಡೆಯೊಂದನ್ನು ತಿಳಿಸಿಬಿಡುತ್ತೇನೆ. ಅದರಲ್ಲಿ ಛಾಂಪಿಯನ್ ಆದವನು ಆಂಜನೇಯ ಉರುಫ್ ಹನುಮಂತರಾವ್. ಕ್ರೀಡೆಯ ಹೆಸರು ಹಿಚಗನರೇ ಕಾಳಿಂಗ್.

ರಾವಣವಧೆಯ ಸಂತೋಷಾರ್ಥವಾಗಿ ರಾಮರಾಯರು ಏರ್ಪಡಿಸಿದ್ದ ಸಪ್ಪರ್ ಪಾರ್ಟಿಯಲ್ಲಿ ಈ ಸ್ಪರ್ಧೆ ನಡೆಯಿತು. ಅಡಿಗೆ ಮಾಡಿದವರು ಶಾಲಿಹೋತ್ರ ಮಹರ್ಷಿಗಳು. ಆತನು ಮೂರುದಿವಸ ವಿಶೇಷ ಪಾಕಗಳನ್ನಿಳಿಸಿ, ಕೊನೆಯದಿವಸ ತನ್ನ ಸ್ಪೆಶಲ್ ಆದ ಅವರೇಕಾಳು ಉಸುಲಿಯನ್ನು ತಯಾರಿಸಿದನು. ಆ ಒಗ್ಗರಣೆಯ ವಾಸನೆ ಬಡಿದು ಇಂದ್ರಾದ್ಯಷ್ಟದಿಕ್ಪಾಲಕರೂ, ತ್ರಿಮೂರ್ತಿಗಳೂ ಓಡಿಬಂದರು ಕರೆ ಯಿಲ್ಲದ ಊಟಕ್ಕೆ ಸ್ವಾಹ್ವಾನಿತರಾಗಿ. ಎಲ್ಲರೂ ಊಟಕ್ಕೆ ಕುಳಿತರು. ಪಾಯಿಸ,

ಹೋಳಿಗೆ, ಚಿರೋಟಿ, ಎಣ್ಣೊರಿಗೆ, ಬಿರಿಯಾನಿ (ಜಿಂಕೆಯ ಮಾಂಸದ ಬಿರಿಯಾನಿ. ಚಿತ್ರಕೂಟದಲ್ಲಿ ಲಕ್ಷ್ಮಣನು ಬೇಟೆಯಾಡಿ, ಡಬ್ಬಗಳಲ್ಲಿ ಶೇಖರಿಸಿದ್ದ ಮಾಂಸ ಜೆನೋ ಫೋಡಿಸ್ ಮಟಲಸ್ ಎಂಬ ವಿದೇಶೀಯನು ಹಾಗೆಂದು ಬರೆದಿದ್ದಾನೆ ದ್ರಾವಿಡ ಮುನ್ನೇತ್ರ ಕಳಗಕ್ಕೆ ಆವನು ಸೇರಿದ್ದನೇ ಎಂಬ ಸಮಸ್ಯೆ ಐತಿಹಾಸಿಕರಿಗೆ ಸೇರಿದ್ದು) ಎಲ್ಲಾ ಮುಗಿದವು. ಬಳಿಕ ಊರ್ವಶಿ, ರಂಭೆ, ಕೊಂಬೆ ಮೊದಲಾದ ಅಪ್ಸರ ಸ್ತ್ರೀಯರು ಬಂಗಾರದ ತಟ್ಟೆಗಳಲ್ಲಿ ಅವರೇಕಾಳಿನ ಉಸುಲಿಯನ್ನು ತಂದಿಟ್ಟರು....

ಆ ಸಭಾಸ್ಥಾನದಲ್ಲಿದ್ದ ನೀಲನೆಂಬ ವಾನರ ಮುಖ್ಯನು ಕ್ಯೂರಿಯಾಸಿಟಿಗಾಗಿ ಒಂದು ಕಾಳನ್ನು ಹಿಸುಕಿದ. ಒಳಗಿನ ಕಾಳು ಎಂಟಡಿ ಮೇಲಕ್ಕೆ ಹಾರಿತು. ಅವನ ಪಕ್ಕದಲ್ಲಿದ್ದ ನಳನೆಂಬ ವಾನರ ಮುಖ್ಯನು ನಾನೇನು ಕಡಿಮೆಯೇ ಎಂದು ತಾನೊಂದು ಕಾಳನ್ನು ಹಿಸುಕಿದ ೨೦ ಅಡಿ ಮೇಲಕ್ಕೆ ಹಾರಿತು. ಆಗ ಶುರು ವಾಯಿತು ಸ್ಪರ್ಧೆ. ರಿಸಲ್ಟ್ ಕೆಳಗಿದೆ:--

ಅಂಗದ—೧೦೦ ಅಡಿ

ಜಾಂಬವ—೪ ಫರ್ಲಾಂಗ್

ಸುಗ್ರೀವ—೧ ಮೈಲು

ವಿಭೀಷಣ—೧.೧ ಮೈಲು

ಶತ್ರುಘ್ನ—೧.೨........

ಲಕ್ಷ್ಮಣ—೧.೩ ಮೈಲು.

ಇಂದ್ರಾದ್ಯಷ್ಟ ದಿಕ್ಪಾಲಕರಿಗೆ ಉಸುಳಿಯ ರುಚಿ ಹತ್ತಿತ್ತು ಸ್ಪರ್ಧೆಯಲ್ಲಿ ಭಾಗವಹಿಸಲಿಲ್ಲ. ಆದರೆ ಲೀಲಾವಿಗ್ರಹ ಶ್ರೀರಾಮನು—೨ ಮೈಲು. ಭಕ್ತನೇನು ಕಡಿಮೆಯೇ ಆಂಜನೇಯನು ಹಿಚುಕಿದ ಕಾಳು ೫ ಮೈಲು ಮೇಲೆ ಹೋಗಿ ಗೌರೀ ಶಂಕರದಮೇಲೆ ಬಿತ್ತು ಅಲ್ಲಿಯೇ ಇತ್ತೇ? ತೇನ್ಸಿಂಗ್, ಹಿಲಾರಿಗಳಿಗೆ ಗೊತ್ತು.

ಹೀಗಿರಲು, ಭಾರತೀಯರೇ ಮಲಗಿಕೊಳ್ಳಿರಿ. ಈ ಆಧುನಿಕ ಚೊತ್ತೆ ರಿಕಾರ್ಡುಗಳನ್ನು ಮುರಿಯುವ ತಂಟೆ ಬೇಡ. ಪರರು ನಮ್ಮ ಮೇರುಕ್ರೀಡಾ ವಿಕ್ರಮಗಳನ್ನು ಮುರಿದಮೇಲಲ್ಲವೇ ನಾವು ವಿಕ್ರಮಗಳಿಗಾಗಿ ಮತ್ತೆ ಶ್ರಮಿಸಬೇಕಾಗಿ ಬರುವುದು.

— ಅ. ರಾ. ಸೇ.

---

# ಕೊರವಂಜಿ

ಕೊರವಂಜಿಯು ತಿಳಿನಗೆಯ ಸಚಿತ್ರ ಮಾಸಪತ್ರಿಕೆ. ತಿಳಿಹಾಸ್ಯದ ಲೇಖನಗಳು, ಹರಟೆಗಳು, ಅಣಕವಾಡುಗಳು, ನಗೆ ಹಾಡುಗಳು ಇವುಗಳಿಗೆ ಸರ್ವದಾ ಸುಸ್ವಾಗತವುಂಟು. ಆದರೆ ವ್ಯಕ್ತಿಯನ್ನುದ್ದೇಶಿಸಿ ಬರೆದ ಲೇಖನಗಳಿಗೆ ಎಡೆಯಿಲ್ಲ.

ಲೇಖನಗಳನ್ನು ಕಳುಹಿಸುವವರು ತಮ್ಮಲ್ಲಿ ಒಂದು ಪ್ರತಿಯನ್ನಿಟ್ಟುಕೊಂಡರೆ ಬಹಳ ಒಳಿತು. ಸುಲಭವಾಗಿ ಓದುವಂತೆ ತಿಳಿಬರಹದಲ್ಲಿ ಬರೆದರೆ, ಅಚ್ಚಾದಾಗ ತಪ್ಪು ನೆಪ್ಪುಗಳು ಕಡಿಮೆಯಾಗುವುವು. ಒಪ್ಪಿದ ಲೇಖನಗಳಿಗೆ ಪ್ರತ್ಯುತ್ತರ ಉಂಟು.

ಸಂಪಾದಕೀಯ ಪತ್ರವ್ಯವಹಾರಗಳನ್ನು ಸಂಪಾದಕರಲ್ಲೂ ವ್ಯವಸ್ಥಾಪಕರಲ್ಲಿ ಮಿಕ್ಕ ವಿಚಾರಗಳನ್ನೂ ಪ್ರಸ್ತಾಪಿಸಬೇಕು.

ಬಳೇಪೇಟೆ, ಬೆಂಗಳೂರು ೨

**ವಾರ್ಷಿಕ ಚಂದಾ ಅಂಚೆ ಮೂಲಕ ರೂ. ೩—೦—೦**

**ಬಿಡಿ ಪ್ರತಿ ಕೇವಲ ಆಣೆ ೦—೪—೦**

**ಚಂದಾದಾರರು ವಿಳಾಸ ಬದಲಾವಣೆಯಾದಲ್ಲಿ, ಕೂಡಲೆ ನಮಗೆ ತಿಳಿಸಿದರೆ ಬಹಳ ಸಹಾಯ ಮಾಡಿದಂತಾಗುವುದು.**

REG. No M 4718 KORAVANJI, MAY 1955



Printed by B S Iyengar, Bangalore City.
Publisher—B N. Gupta. Editor—M Sivaram.